ಕಾಯಕವೇ ಕೈಲಾಸ



# ಸಿದ್ಧಗಂಗಾ



ಸಂಪುಟ : ೪೯ ಜುಲೈ ೨೦೧೩ ಸಂಚಿಕೆ : ೭



ಪರಮಪೂಜ್ಯ ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ತುಮಕೂರು ಸಿದ್ಧಗಂಗಾ ಬಾಲಕರ ಪ್ರಥಮ ದರ್ಜೆ ಕಾಲೇಜಿನ ವಾರ್ಷಿಕೋತ್ಸವ ಸಮಾರಂಭವನ್ನು ಬೆಂಗಳೂರು ವಿ.ವಿ.ಯ ಕುಲಪತಿಗಳಾದ ಡಾ. ಬಿ. ತಿಮ್ಮೇಗೌಡ ಅವರು ದೀಪ ಬೆಳಗಿಸಿ ಉದ್ಘಾಟಿಸಿದರು. ಪ್ರೊ. ಬಿ.ಎಲ್. ವೈದ್ಯೇಶ್ವರ, ಬೋಧಕ ವರ್ಗದವರು ಉಪಸ್ಥಿತರಿದ್ದರು.



ಶ್ರೀಮಠದಲ್ಲಿರುವ ಸಿದ್ಧಗಂಗಾ ಇಂಗ್ಲೀಷ್ ಮಾಧ್ಯಮ ಪ್ರೌಢಶಾಲೆಯ ನೂತನ ಕಟ್ಟಡದ ಉದ್ಘಾಟನೆಯನ್ನು ಶ್ರೀ ಸಿದ್ಧಲಿಂಗ ಸ್ವಾಮೀಜಿಯವರು ದೀಪ ಬೆಳಗಿಸಿ ಉದ್ಘಾಟಿಸಿದರು. ಸಮಾರಂಭದಲ್ಲಿ ವಿದ್ವಾನ್ ಶ್ರೀ ಕೆ.ಎಸ್. ಶಿವನಂಜಯ್ಯ, ಶ್ರೀ ಟಿ.ಕೆ. ನಂಜುಂಡಪ್ಪ, ಡಾ. ಎಂ.ಎನ್. ಚನ್ನಬಸಪ್ಪ, ಪ್ರೊ. ಬಿ.ಜಿ. ಗಂಗಾಧರಯ್ಯ, ಶ್ರೀ ಎಸ್. ಸಿದ್ಧಲಿಂಗಯ್ಯ, ಶ್ರೀಮತಿ ರೇಣುಕಾ ಪರಮೇಶ್ ಉಪಸ್ಥಿತರಿದ್ದರು.



ಶ್ರೀ ಸಿದ್ಧಲಿಂಗ ಸ್ವಾಮೀಗಳವರ ದಿವ್ಯಸಾನ್ನಿಧ್ಯದಲ್ಲಿ ತುಮಕೂರಿನ ಸಿದ್ಧಗಂಗಾ ಮಹಿಳಾ ಪಿ.ಯು. ಕಾಲೇಜಿನ ವಾರ್ಷಿಕ ಚಟುವಟಿಕೆಗಳ 'ಸಂಸ್ಕೃತಿ' ಪ್ರತಿಭಾ ಪುರಸ್ಕಾರ ಸಮಾರಂಭವನ್ನು ಕೇಂದ್ರ ಸಾಹಿತ್ಯ ಅಕಾಡೆಮಿಯ ಕಾರ್ಯದರ್ಶಿಗಳಾಗಿದ್ದ ಅಗ್ರಹಾರ ಕೃಷ್ಣಮೂರ್ತಿರವರು ಉದ್ಘಾಟಿಸಿದರು. ಈ ಸಂದರ್ಭದಲ್ಲಿ ಪ್ರೋ. ಜಿ. ರೇಣುಖಪ್ಪ, ಡಾ. ನಾಗಭೂಷಣ, ಬೋಧಕ ವರ್ಗದವರು ಉಪಸ್ಥಿತರಿದ್ದರು.



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥

**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ


**ಸಂಪುಟ : ೪೯ ಜುಲೈ ೨೦೧೩ ಸಂಚಿಕೆ : ೭**


## ಒಳಪುಟಗಳಲ್ಲಿ ..................




• ಚಂದಾ ವಿವರ : ವಾರ್ಷಿಕ ಚಂದಾ ರೂ. 150/-
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 12.00

ಸಂಪಾದಕ :
ಹೆಚ್.ವಿ. ವೀರಭದ್ರಯ್ಯ

ಸಹ ಸಂಪಾದಕ :
ಎಚ್.ಎಸ್. ಸಿದ್ಧಗಂಗಪ್ಪ

ಸಂಚಾಲಕ :
ಎಂ. ರೇಣುಕಾರಾಧ್ಯ

ಪ್ರಕಾಶಕರು:
ಹೆಚ್.ಬಿ. ಗಂಗಾಧರಯ್ಯ

ವಿತರಣೆ :
ಆರ್.ಎಸ್. ಮಲ್ಲೇಶಪ್ಪ

**ಹಳೆಯ ವಿದ್ಯಾರ್ಥಿಗಳ ಸಂಘ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -572 104.

ಮುದ್ರಕರು:
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ
ಆಫ್‌ಸೆಟ್ ಮುದ್ರಣಾಲಯ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು -572 104.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ

## ದಾಖಲಾತಿ

ಶ್ರೀಮಠದಲ್ಲಿ ಜನಸಂದಣಿ. ತಮ್ಮ ಮಕ್ಕಳನ್ನು ವಿವಿಧ ತರಗತಿಗಳಿಗೆ ಸೇರಿಸಲು ನೂರಾರು ಊರುಗಳಿಂದ ಬೀದರ್, ರಾಯಚೂರು, ಬಿಜಾಪುರ, ಬಳ್ಳಾರಿ, ಗುಲ್ಬರ್ಗಾ, ಚಿತ್ರದುರ್ಗ, ಹಾಸನ, ಚಿಕ್ಕಮಗಳೂರು, ಬೆಂಗಳೂರು ಕಡೆಯಿಂದ ಪಾಲಕರು, ಪೋಷಕರು ಕಿರಿಯ ವಯಸ್ಸಿನ ವಿದ್ಯಾರ್ಥಿಗಳನ್ನು ಕರೆದುಕೊಂಡು ಬರುತ್ತಿರುವ ದೃಶ್ಯ. ಪರಮಪೂಜ್ಯ ಶ್ರೀ ಶ್ರೀಗಳವರಿಗೆ ಕ್ಷಣ ಕ್ಷಣಾರ್ಧವೂ ಬಿಡುವು ಸಿಗದಂಥ ಸನ್ನಿವೇಶ. ಬಂದ ಪ್ರತಿಯೊಬ್ಬ ವಿದ್ಯಾರ್ಥಿಯನ್ನು ಸ್ವತಃ ಶ್ರೀಗಳವರೇ ಮಾತಾಡಿಸಿ, ಪಾಲಕರನ್ನು ವಿಚಾರಿಸಿ ಪ್ರವೇಶ ಪತ್ರದ ಮೇಲೆ *'Admit'* ಎಂದು ಆದೇಶ ನೀಡುವ ಪದ್ಧತಿ. ಇದು ನಡೆದು ಬಂದಿರುವುದು ಇಂದು ನಿನ್ನೆಯದಲ್ಲ. 1941ರಿಂದಲೂ ಬೆಳೆದು ಬಂದಿರುವ ಶಿಸ್ತು. ಶ್ರೀಗಳವರಿಗೆ 106 ವರ್ಷಗಳ ತುಂಬು ವಯಸ್ಸಿನಲ್ಲಿ ನಡೆದು ಬಂದಿರುವ ಕ್ರಮ. 'ಕ್ರಮ ತಪ್ಪಿ ನಡೆಯದ' ಸಂಪ್ರದಾಯ. ಪ್ರವೇಶ ಪಡೆದವರ ಸಂತೋಷ. ಆ ತಂದೆ ತಾಯಿಗಳ ಮಾತುಗಳಲ್ಲಿ ಕಂಡು ಬರುವ ಧನ್ಯತೆ. ತಮ್ಮ ಮಕ್ಕಳಿಗೆ ಹೇಳುವ ಬುದ್ಧಿ ಮಾತುಗಳು. 'ಸ್ವಾಮಿಗಳ ಆಶೀರ್ವಾದ ನಿಮ್ಮದಾಗಿದೆ, ಅದೃಷ್ಟವಂತರು, ಚೆನ್ನಾಗಿ ಓದಿ ಮುಂದಕ್ಕೆ ಬನ್ನಿ' ಎಂಬ ಹಿತವಚನ. ವಿದ್ಯಾರ್ಥಿಗಳಿಗೆ ಬೇಕಾದ ಬಟ್ಟೆ, ಬರೆ, ಚಾಪೆ, ಟ್ರಂಕುಗಳ ಕೊಳ್ಳುವಿಕೆ. ಅವುಗಳದೇ ಮೆರವಣಿಗೆ. ಕ್ಯಾತ್ಸಂದ್ರದಿಂದ ಶ್ರೀಮಠದವರೆಗೂ ವಿದ್ಯಾರ್ಥಿಗಳಿಗೆ ಮೂಲಭೂತ ಅವಶ್ಯತೆಗಳಿಗೆ ಬೇಕಾಗುವ, ಊಟದ ತಟ್ಟೆ, ಲುಂಗಿ, ಕೆಂಪು ಟವಲು, ಚಾಪೆ, ಬಕೇಟು, ಸೋಪಿನ ಬಾಕ್ಸ್‌ಗಳ, ಕನ್ನಡಿ, ಬಾಚಣಿಗೆಗಳ, ಬೀದಿ ಬದಿ ಅಂಗಡಿಗಳು. ಸಾಲುಗಟ್ಟಿ ಅವುಗಳ ಮುಂದೆ ಜನ. ವಿವಿಧ ವಸತಿ ಶಾಲೆಗಳಿಗೆ ಬೇಕಾದ ವಿದ್ಯಾರ್ಥಿಗಳ ಸಮವಸ್ತ್ರಕ್ಕಾಗಿ ಶ್ರೀಮಠದ ಮಳಿಗೆಯಲ್ಲಿ ಕಾಲಿಡಲು ಜಾಗವಿಲ್ಲದಷ್ಟು ಗ್ರಾಹಕರು, ಸಾಮೂಹಿಕ ಪ್ರಾರ್ಥನಾ ಸಭೆಯನ್ನು ಕಂಡು ಭಕ್ತಿ ಭಾವಾವೇಶಕ್ಕೊಳಗಾಗುವ ಆ ಮಕ್ಕಳ ಸಂಬಂಧಿಕರು. ಶ್ರೀಗಳವರ ಆಶೀರ್ವಚನವನ್ನು ಕೇಳಿ ತಮ್ಮ ಮಕ್ಕಳ ಪುಣ್ಯ-ಒಳ್ಳೆಯ ಸನ್ನಿವೇಶಕ್ಕೆ ಬಂದರೆಂದು ತಮ್ಮ ತಮ್ಮಲ್ಲೇ ಮಾತಾಡಿಕೊಳ್ಳುವ ದೃಶ್ಯ. ಪೂಜ್ಯ ಕಿರಿಯ ಶ್ರೀಗಳವರನ್ನು ಕಂಡು ತಮ್ಮ ಮಕ್ಕಳಿಗೆ ಪ್ರವೇಶ ಸಿಕ್ಕಿತು ಎಂದು ಅರಿಕೆ ಮಾಡಿಕೊಳ್ಳುವ ಚಿತ್ರ, ಇದೆಲ್ಲ ನೋಡುವ ಕಣ್ಗಳ ಸಿರಿ, ನಾಡಿನ ಐಸಿರಿ, ಯುಗದಸಿರಿ, ಜಗದಸಿರಿ.

–ಸಂಪಾದಕ







## ಉತ್ತಮ ಭವಿಷ್ಯ

ಶ್ರೀಮಠಕ್ಕೆ ನೂರಾರು ಕಿ.ಮೀ. ದೂರದಿಂದ ಬಂದಿದ್ದೀರಿ. ನಿಮ್ಮ ತಾಯಿ ತಂದೆಗಳು ಬಹುದೊಡ್ಡ ಆಸೆಯನ್ನಿಟ್ಟುಕೊಂಡು ಕರೆತಂದು ನಿಮ್ಮನ್ನು ಸಂಸ್ಥೆಗೆ ಸೇರಿಸಿದ್ದಾರೆ. ನಿಮ್ಮ ಭವಿಷ್ಯವೇ ಅವರಿಗೆ ದೊಡ್ಡಕನಸು. ನಮ್ಮ ಮಗ ಚೆನ್ನಾಗಿ ಓದಬೇಕು. ಓದಿ ದೊಡ್ಡವನಾಗಿ ಬಾಳಬೇಕು. ಊರಿಗೆ ಹೆಸರು ತರಬೇಕು- ಎಂದೆಲ್ಲಾ ಆಸೆ ಆಕಾಂಕ್ಷೆಗಳನ್ನು ತಮ್ಮದಾಗಿಸಿಕೊಂಡವರಾಗಿದ್ದಾರೆ. ನೀವು ಅದನ್ನು, ಅವರ ಆಸೆ ಆಕಾಂಕ್ಷೆಗಳನ್ನು ಮರೆಯಬಾರದು. ಶ್ರೀಮಠದ ನಿಯಮ ನಿಬಂಧನೆಗಳಿಗೆ ಬದ್ಧರಾಗಿರಬೇಕು. ಸಂಜೆ ಮುಂಜಾನೆಗಳಲ್ಲಿ ನಡೆಯುವ ಸಾಮೂಹಿಕ ಪ್ರಾರ್ಥನಾ ಸಭೆಗೆ ಎಂದೂ ತಪ್ಪಿಸಿಕೊಳ್ಳಬಾರದು. ಇಂದು ನಿಮಗೆ ಪ್ರಾರ್ಥನೆಯ ಶಕ್ತಿ, ಮಹತ್ವ ಪ್ರಯೋಜನಗಳು ಅರ್ಥವಾಗುವುದಿಲ್ಲ. ಆದರೆ ನೀವು ಬೆಳೆದು ದೊಡ್ಡವರಾದಾಗ ಅದರ ಬೆಲೆ ತಿಳಿಯುತ್ತದೆ. ನಿಮಗೆ ಗೊತ್ತಿರಬೇಕು. ದೇಶಕ್ಕೆ ಸ್ವಾತಂತ್ರ್ಯ ತಂದು ಕೊಟ್ಟ ಮಹಾತ್ಮಾಗಾಂಧೀಜಿಯವರು ಪ್ರಾರ್ಥನೆಯನ್ನು ತಮ್ಮ ಪ್ರಾಣದಷ್ಟೇ ಪ್ರೀತಿಸುತ್ತಿದ್ದರು. ನೀವು ಇಲ್ಲಿಗೆ ಬಂದಿರುವುದು ವಿದ್ಯಾಭ್ಯಾಸಕ್ಕೆ. ಅದೊಂದೇ ನಿಮ್ಮ ಗುರಿಯಾಗಿರಬೇಕು. ತರಗತಿಗಳಿಗೆ ಎಂದೂ ಯಾವ ಕಾರಣಕ್ಕೂ ತಪ್ಪಿಸಿಕೊಳ್ಳಬಾರದು. ನಿಮ್ಮ ಅಧ್ಯಾಪಕರ ಬಗ್ಗೆ ಭಕ್ತಿ ಬೆಳೆಸಿಕೊಳ್ಳಿ. ವಿಧೇಯರಾಗಿ ನಡೆದುಕೊಳ್ಳಿ. ನಿಮಗೆ ತಿಳಿಯದುದನ್ನು, ಅರ್ಥವಾಗದುದನ್ನು ಅವರನ್ನು ಪ್ರತ್ಯೇಕವಾಗಿ ಕಂಡು ಕೇಳಿ ಅರ್ಥಮಾಡಿಕೊಳ್ಳಿ. ನೀವು ವಾಸಮಾಡುವ ರೂಮುಗಳನ್ನು ಸ್ವಚ್ಛವಾಗಿಟ್ಟುಕೊಳ್ಳಿ. ಯಾವುದೇ ವಸ್ತುವನ್ನು ಹಾಳು ಮಾಡಬೇಡಿ. ಇನ್ನೊಂದು ಗಮನಿಸಬೇಕಾದ ಮಾತು. ಪ್ರಸಾದವನ್ನು ಹೊಟ್ಟೆ ತುಂಬಾ ಊಟ ಮಾಡಿ. ಯಾವುದೇ ಕಾರಣಕ್ಕೂ ನಿಮ್ಮ ತಟ್ಟೆಗೆ ನೀಡಿಸಿಕೊಂಡ ಪ್ರಸಾದವನ್ನು ಚೆಲ್ಲಬೇಡಿ, ಅಥವಾ ಬಿಡಬೇಡಿ. ಏಕೆ ಗೊತ್ತೇ? ಒಂದು ಅಗಳು ಪ್ರಸಾದದ ಹಿಂದೆ ಸಾವಿರ ಜನರ ಶ್ರಮವಿರುತ್ತದೆ, ತ್ಯಾಗ ವಿರುತ್ತದೆ. ಅದಕ್ಕೆ ದ್ರೋಹಮಾಡಬಾರದು, ಇನ್ನೊಂದು ಮಾತು ಕಾಲಹರಣ ಮಾಡಬೇಡಿ. ಅದಕ್ಕಿಂತ ದೊಡ್ಡ ಪಾಪ ಮತ್ತೊಂದಿಲ್ಲ. ಹಣ ಕಳೆದರೆ ಸಿಕ್ಕೀತು, ಕ್ಷಣ ಕಳೆದರೆ ಸಿಗಲಾರದು. ಶ್ರೀಮಠದಲ್ಲಿ ನಿಮಗೆ ಕಲಿಯುವುದಕ್ಕೆ ಸಾಕಷ್ಟು ಸೌಲಭ್ಯಗಳಿವೆ; ಅವಕಾಶಗಳಿವೆ. ಅವುಗಳ ಉಪಯೋಗ ಮಾಡಿಕೊಳ್ಳಿ. ನಿಮ್ಮ ಆರೋಗ್ಯ ಕೆಡದಂತೆ ನೋಡಿಕೊಳ್ಳಿ. ನಿಮ್ಮ ಆರೈಕೆಗಾಗಿ ಸ್ವಾಮಿಗಳಿದ್ದಾರೆ. ನಿಮ್ಮ ಚಟುವಟಿಕೆಗಳನ್ನು ಅವರು ಕಣ್ಣಲ್ಲಿ ಕಣ್ಣಿಟ್ಟು ಗಮನಿಸುತ್ತಿರುತ್ತಾರೆ. ಜೊತೆಗೆ ರೂಂ ಮೇಲ್ವಿಚಾರಕರಿರುತ್ತಾರೆ. ನಿತ್ಯ ಸಾವಿರಾರು ಮಂದಿ ಭಕ್ತಾದಿಗಳು ಬರುತ್ತಿರುತ್ತಾರೆ. ಅವರ ಕಡೆ ನಿಮ್ಮ ಗಮನ ಹೋಗಬಾರದು. ಅವರೇನಾದರೂ ನಿಮ್ಮನ್ನು ಕೇಳಿದರೆ ಮೃದುವಾಗಿ ಅವರೊಡನೆ ನಡೆದುಕೊಳ್ಳಬೇಕು. ನೀವು ಬಂದಿರುವ ಉದ್ದೇಶವನ್ನು ಮರೆಯದಂತೆ ಇಲ್ಲಿರುವಷ್ಟು ದಿನ ನಡೆದುಕೊಳ್ಳಬೇಕು.

☆

ಓಂ

## ಶ್ರೀ ಸಿದ್ಧಲಿಂಗೇಶ್ವರ ವಚನ

ರೂಪನಲ್ಲದೆ ನಿರೂಪನಲ್ಲದೆ ಸಾವಯನಲ್ಲದೆ
ನಿರವಯನಲ್ಲದೆ ನಾಮನಲ್ಲದೆ ನಿರ್ನಾಮನಲ್ಲದೆ
ಇವು ಆವಪರಿಯು ಅಲ್ಲದ ಕಾರಣ ನೀನು
ನಿಃಕಲನಯ್ಯಾ
ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ

ರುದ್ರಮೂರ್ತಿಯಂಥಾತನಲ್ಲದೆ, ಮಹೇಶ್ವರಮೂರ್ತಿಯಂಥಾತನಲ್ಲದೆ, ಸದಾಶಿವಮೂರ್ತಿಯಂಥಾತನಲ್ಲದೆ, ಈಶ್ವರ ಮೂರ್ತಿಯಂಥಾತನಲ್ಲದೆ, ಮಹಾಲಿಂಗಮೂರ್ತಿಯಂಥಾಥನಲ್ಲದೆ, ಪರಶಕ್ತಿ ಪ್ರಣಮಂಥಾತನಲ್ಲದೆ, ಇವಾವ ಪ್ರಕಾರವೂ ಉಂಟಾಗದ ನಿಮಿತ್ತ ನೀನು ನಿಃಕಲಬ್ರಹ್ಮವು ಷಟ್ಕಲಗಳಿಗೆ ಮೀರಿ ತೋರಲ್ಪಟ್ಟಾತನಯ್ಯಾ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ|| ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು- ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಊಹೆಗತೀತನೆ ಉತ್ತರಕೆ ಸಿಲುಕದನೆ
ಭಾವಗೋಚರ ಬಂಧು ಸುಂದರನೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಕ್ತಿಯಂಗನೆ ಕರೆಸಿ ಪರಿಪೂರ್ಣವಾಗಿರಿಸಿ
ಜ್ಞಾನಗಂಗೆಯೊಳು ಮೇಳವಿಸಿ ನಗುತಿರುವ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ದೇವರಿಗಿಂತಲೂ ಜಂಗಮವೆ ಮೇಲೆಂಬ
ಜಂಗಮ ದೊರೆಯೆ ಒಳಿತೆಂಬ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಎಂತು ಜೀವಿಸಬಹುದು ನಿನ್ನ ಕೃಪೆ ಕಾನಿರದೆ
ಎಂತು ಜೀವಿಸಬಹುದುನೀ ಹರಸದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜಗಕೆ ಬಸವಣ್ಣನ ತೋರಿದ ಘನಮನನೆ
ಯುಗದ ಜೀವನಕೆ ತಲೆಮಣಿಯಾದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಅನುಭಾವದ ಗಮ್ಯವೆ ಅರಿವಿನ ವಿಶ್ರಾಮವೆ'
ಭಾವದ ಬಯಕೆಯ ನಿಜನಿಲವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಪರಿಣಾಮದ ಮೇರುವೆ ಮನದ ಸಿರಿಮಹಿಮವೆ'
ಪರಮಪಾವನ ಸಿರಿಚರಣವೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಎಲ್ಲೆಲ್ಲೂ ನೀನಿರುವೆ ಎಲ್ಲದರೊಳು ನೀನಿರುವೆ
ಎನ್ನಮನದೊಳಗೆ ತುಂಬಿರುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಎನ್ನ ಭಾವದ ಭವ್ಯ ಜಂಗಮವೆ ಲಿಂಗವೆ
ಎನ್ನ ಬಾಳಿನ ಪರಮ ಬಂಧುವೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕರ್ಪೂರನಾನಾದೆ ಜ್ಯೋತಿಯು ನೀನಾದೆ
ನಾನೀನೆಂಬುದನೊಳಕೊಂಡ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

– ಹೆಚ್.ವಿ. ವೀರಭದ್ರಯ್ಯ





## ಪ್ರಾರ್ಥನಾಯೋಗ ಬೇಡುವ ಕಲೆ

-ಶ್ರೀ ಕುಮಾರಸ್ವಾಮಿಗಳವರು *

ಪ್ರಾರ್ಥನಾ ಯೋಗಕ್ಕೂ ಇನ್ನುಳಿದ ಯೋಗಗಳಿಗೂ ಅಂತರವಿದೆ. ಪ್ರಾರ್ಥನಾಯೋಗದಲ್ಲಿ ನಾವು ಸಾಕ್ಷಾತ್ ಆ ಪ್ರಭುಶಕ್ತಿಯನ್ನೇ ಆಹ್ವಾನಿಸಿ, ಅದು ನಮ್ಮ ಜೀವನದಲ್ಲಿ ಇಳಿದು ಬಂದು ನಮಗಾಗಿ ಅಭೂತಪೂರ್ವವಾದ ಅದ್ಭುತ ಘಟನೆಗಳನ್ನು ಜರುಗಿಸುವಂತೆ ಮಾಡುತ್ತಿದ್ದರೆ ಉಳಿದ ಯೋಗಗಳಲ್ಲಿ ಪ್ರತ್ಯೇಕ ವ್ಯಕ್ತಿಯು ತನ್ನ ಕೆಲವು ವೈಯಕ್ತಿಕ ಅಂತಃಶಕ್ತಿಗಳನ್ನು ಜಾಗೃತ ಮಾಡಿಕೊಂಡು ಆ ಶಕ್ತಿಗಳ ಮುಖಾಂತರ ಅನೇಕ ಪವಾಡಗಳನ್ನು ಎಸಗುತ್ತಾನೆ. ಎಷ್ಟಾದರೂ ಮಾನವದೇಹದಿಂದ ಒಡಗೂಡಿದ ಯೋಗಿಯಲ್ಲಿ ಜಾಗೃತವಾದ ಅಪಾರ ಶಕ್ತಿಗಳು ಆ ಪ್ರಭು ಶಕ್ತಿಯ ಮುಂದೆ ಏನನ್ನು ಮಾಡಬಲ್ಲವು? ಆದ್ದರಿಂದ ಆ ಪ್ರಭುವನ್ನು ಬೇಡಿರಿ; ಅವನ ಅಪಾರ ಶಕ್ತಿಯು ಇಳಿದು ಬಂದು ನಿಮಗಾಗಿ ಏನು ಬೇಕಾದುದನ್ನೂ ಮಾಡುವುದು. ಆದರೆ ಏನನ್ನು ಬೇಡುವುದು? ಬೇಡುವುದಾದರೆ ಸಿಕ್ಕಸಿಕ್ಕಂತೆ ಬೇಡುವುದಲ್ಲ. ಬೇಡುವುದೂ ಒಂದು ಕಲೆ ಆತ್ಮಕಲ್ಯಾಣಕ್ಕೂ ಲೋಕ ಕಲ್ಯಾಣಕ್ಕೂ ಕಾರಣವಾಗಬಲ್ಲುದನ್ನು ಬೇಡಬೇಕು. ಸಂಕುಚಿತ ಮನಸ್ಸಿನ ಅ ದೂರದರ್ಶಿತ್ವಕ್ಕೊಳಗಾಗಿ, ಚಪಲತೆಯ ಸೆಳವಿಗೆ ಸಿಕ್ಕುಬಿದ್ದು, ನಿರರ್ಥಕವಾದ ನೀರಸವಾದ ನಿರುಪಯುಕ್ತವಾದ ಹಾಸ್ಯಾಸ್ಪದವಾದ ಹೀನವಾದ ಸಂಗತಿಗಳಿಗಾಗಿ ಆ ದೇವನನ್ನು ಕೇಳುವುದೇ? ಈಗಾಗಲೇ ಶಾಸ್ತ್ರೀಯ ಸಂಶೋಧನೆಗಳನ್ನೂ ನಾಗರಿಕತೆಯ ಇನ್ನಿತರ ಸಂಗತಿಗಳನ್ನೂ ವಿಸಂಗತ ರೀತಿಯಲ್ಲಿ ಉಪಯೋಗಿಸುತ್ತಿರುವಂತೆ ಆ ಪ್ರಭುಶಕ್ತಿಯ ದುರುಪಯೋಗವನ್ನು ಮಾಡಿದ್ದಾದರೆ, ನಾವು ಎಂದೂ ನೆನೆಯದ ನಿರೀಕ್ಷಿಸದ ಅನರ್ಥ ಪರಂಪರೆಯೇ ನಮಗೆ ಕಟ್ಟಿಟ್ಟ ಪರಿಣಾಮ! ಶ್ರೀ ನಿಜಗುಣ ಶಿವಯೋಗಿಗಳು ಹೇಳುವಂತೆ ಬೇಡಿಕೆಯಿರಬೇಕು;

'ಬೇಡುವೆನಭವ ನಿಮ್ಮನ್ನು ಭವಭವದೊಳು ।
ನೀಡೆನಗೊಲಿದು ಸುಗುಣಸಂತತಿಯನಿಂತು ॥ಪ॥
ಎಡರಡಸಿದ ವೇಳೆಯೊಳು ಧೈರ್ಯವನು
ಸಿರಿವಡೆದು ಜೀವಿಸುವೆಡೆಯೊಳು ವಿನಯವನು ॥
ಕಡುಜವ್ವನದೊಳು ವಿಕೃತಿದೋರದಿಹುದನು
ಪಿಡಿದ ನೇಮವನೆಡೆವಿಡದತಿ ಛಲವನು ॥
ಅಸುವಳಿಯಲು ದೇಹಿಯೆನಲೊಲ್ಲದಧಟನು
ಪುಸಿಯೆನೆಲ್ಲಿಯು ನುಡಿಯದ ಸತ್ಯವಿದನು ॥
ಮಸಳಿಸದಿಹ ಪುಣ್ಯಮಯ ಕೀರ್ತಿಯನು ಶಾಂತ.
ರೊಸೆದಹುದೆಂದು ಬಣ್ಣಿಸುವ ವರ್ತನವನು ॥
ವಿತರಣದೊಡನೆ ಭೋಗಿಸುವರ್ಥ ದೊದವನು
ಹಿತವಚನವನೆ ತೊಡವೆನಿಪ ದಾನವನು ॥
ಶ್ರುತಿಬೋಧನೆಯೊಳು ಪರತಿಯಿಲ್ಲದಿಹುದನು
ನುತಿವೆತ್ತ ಕೈಸಾರುತಿಹ ಮನೋರಥವನು ॥
ಕೋಪವಂಟದ ತಪವನು ಪರವಧುವಿನ
ರೂಪು ಕಂಡೆಳಸದ ಕರಣವಿಜಯವನು ॥
ತಾಪವಡರಿ ಕೆಡಿಸಿದ ಸಾರ ಸುಖವನು
ಕಾಪಟ್ಯವಿಲ್ಲದಾಶ್ರಮಧರ್ಮರತಿಯನು ॥
ಧರೆಯೊಳತ್ಯಧಿಕವೆನಿಪ ಶಾಂತಿಮತವನು
ಕರುಣ ವಿದ್ಯೆಗಳುಳ್ಳ ಗುರುಭಜನೆಯನು ॥
ಪರತರ ಮುಕುತಿದೋರುವ ಶಾಸ್ತ್ರವನು ಕಂತು-
ಹರ ಶಂಭುಲಿಂಗ ನಿಮ್ಮಡಿಯ ಭಕ್ತಿಯನು ॥

ಯಾಚನೆಯ ಕ್ರಮವು ಇಲ್ಲಿ ಮಾರ್ಮಿಕವಾಗಿ ಮೂಡಿಬಂದಿದೆ. ಮಾನವನು ಮರಳಿ ಹುಟ್ಟಿಬಂದ ಜನ್ಮಾಂತರಗಳು ಲೆಕ್ಕವಿಲ್ಲದಷ್ಟು, ಅವನು ಕುಡಿದ ತಾಯಿಯ ಮೊಲೆಹಾಲು ಸಪ್ತಸಾಗರದಷ್ಟು! ಅವನು ಜನುಮ ಜನುಮಗಳಲ್ಲಿ ಬಿಟ್ಟುಹೋದ ಎಲುವುಗಳು ಹಿಮಾಲಯ ಪರ್ವತದಷ್ಟು!

* ನವಕಲ್ಯಾಣಮಠ, ಭೂಸಪೇಟ, ಧಾರವಾಡ.

'ಧರ್ಮನಿರಪೇಕ್ಷತೆ ಎನ್ನುವುದು ಸಾಪೇಕ್ಷ ಸಿದ್ಧಾಂತದಷ್ಟೇ ಹೊರತು ಅದೇ ಎಲ್ಲವೂ ಅಲ್ಲ'
-ಡಾ|| ಎಸ್. ವಿದ್ಯಾಶಂಕರ್

ಇಂತಹ ಪ್ರತಿಯೊಂದು ಜನ್ಮದಲ್ಲಿ ಆ ದೇವನನ್ನು ಬೇಡುವ ಜನ್ಮಸಿದ್ಧವಾದ ಅಧಿಕಾರವನ್ನು ಅವನು ಪಡೆದುಕೊಂಡು ಬರುತ್ತಾನೆ. ಈ ಜೀವನವು ಎಡರು ತೊಡರುಗಳ ಆಗರ, ಕಷ್ಟ-ನಷ್ಟಗಳ ದುಃಖ-ದುಮ್ಮಾನಗಳ ಸಾಗರ! ಮಾನವನಿಗೆ ಹಸಿವು ತೃಷೆ, ಶೋಕ, ಮೋಹ ಇತ್ಯಾದಿ ದ್ವಂದ್ವಗಳು ಎಂದಿನಿಂದಲೂ ಪೀಡೆಯನ್ನು ಕೊಡುತ್ತಲೇ ಇರುತ್ತವೆ. ಈ ದ್ವಂದ್ವಗಳ ಬಡಿದಾಟವಿಲ್ಲದಿದ್ದರೆ ಅದು ಪ್ರಪಂಚವೇ ಅಲ್ಲ. ಆದರೂ ಈ ಪ್ರಪಂಚದಲ್ಲಿ ಅವನ್ನು ಎದುರಿಸುವ ಧೈರ್ಯ ಬೇಕು. ಆ ಧೈರ್ಯವೇ ಸಕಲ ಸ್ವತ್ತು, ಸರ್ವ ಸಂಪತ್ತು! ಆಪತ್ತು-ವಿಪತ್ತುಗಳು ಜೀವನದಲ್ಲಿ ಸಂಭವಿಸಿದಾಗ ಆ ಧೈರ್ಯವೆಂಬ ಸಂಪತ್ತು ಬಳಕೆಗೆ ಬರುವುದು. ಧೈರ್ಯವಿಲ್ಲದ ಜೀವನದ ಗತಿಯೆಂದೇನು ? ಜೀವನವೇ ಮುಖ್ಯವಲ್ಲ. ಆದರೆ ಆ ಜೀವನದಲ್ಲಿ ತುಂಬಿಕೊಳ್ಳುವ ಧೈರ್ಯ ಮುಖ್ಯವಾದ ಸಂಗತಿಯಾಗಿದೆ.

ದುಡ್ಡಿದ್ದಾಗ ಸೊಕ್ಕು, ಮದ, ಮಬ್ಬು ಬರದಿರುವುದು ಅಪರೂಪ, ದುಡ್ಡುಳ್ಳ ಕಾಲದಲ್ಲಿ ಧರ್ಮದರ್ಶಿಯಾಗುವ ಬದಲು ದರ್ಪರಾಶಿಯಾಗಿದ್ದಾನೆ. ಮನುಷ್ಯನು ಆ ದುಡ್ಡೇ ದೊಡ್ಡಪ್ಪ. ಇದು ಸಕಲ ಅಧಿಕಾರದ ತಾಯಿ ಅಧಿಕಾರವು ಮಾನವನಲ್ಲಿ ಕೊಳೆಯನ್ನುಂಟು ಮಾಡುವುದು. ಅಂಕೆಯಿಲ್ಲದ ಅಧಿಕಾರವು ಆ ಮಾನವನನ್ನು ಅಳತೆಯಿಲ್ಲದಷ್ಟು ಹೀನಾಯಗೊಳಿಸುವುದು. ಆದರೆ ಇದು ನಿಜವಾದ ಜೀವನವಲ್ಲ. 'ವಿನಯ'ವಿದ್ದರೆ ಅದುವೇ ಜೀವನ. ಸದುವಿನಯವೇ ಸದಾಶಿವನ ಒಲುಮೆ. 'ಕಲ್ಲು ಕಲ್ಲುತಾಗಿದಂತೆ ಸೊಲ್ಲುಬಿರಿಯಾದರೆ, ಅಲ್ಲಿ ನಿಲ್ಲನಯ್ಯಾ ನಮ್ಮ ಅಖಂಡೇಶ್ವರ' ಎಂಬ ಮಾತುಗಳು ಸ್ಮರಣೆಯಲ್ಲಿರಬೇಕು.

*ಬಿದಿರಲಂದಣವಕ್ಕು, ಬಿದಿರಿ ಸತ್ತಿಗೆಯಕ್ಕು;*
*ಬಿದಿರಲ್ಲಿ ಗುಡಿಯು ಗೂಡಾರವಕ್ಕು ;*
*ಬಿದಿರಲ್ಲಿ ಸಕಲಸಂಪದವೆಲ್ಲವು!*
*ಬಿದಿರದವರ ಮೆಚ್ಚ ನಮ್ಮ ಕೂಡಲಸಂಗಮದೇವ!*

ಎಂದು ಹೇಳುವಾಗ ಬಸವಣ್ಣನವರು ಜೀವನದಲ್ಲಿ ವಿನಯದ ಮಹತಿಯು ಬಹಳವಾಗಿದೆ ಎಂಬುದನ್ನು ತೋರಿಸಿ ಕೊಡುತ್ತಾರೆ.

ಪ್ರಾಯ ಪ್ರಾಪ್ತವಾದಾಗ ಪುರುಷನಲ್ಲಿ ಅನೇಕ ವಿಕಾರಗಳು ತೆರೆತೆರೆಯಾಗಿ ಏಳುತ್ತವೆ. ಸುಮಾರು ೧೬ ರಿಂದ ೩೦ ವರ್ಷಗಳ ನಡುವಿನ ಅವಧಿಯಲ್ಲಿ ಮಾನವನ ಅಂತರಂಗ ಒಂದು. ಭೀಕರವಾದ ನರಕುಂಡದಂತೆ ಇರುತ್ತದೆ. ಆಗ ಆ ಪ್ರಭುವೇ ಅವನನ್ನು ಪಾರುಮಾಡಬೇಕು. ಕಾಪಾಡಬೇಕು ಯಾಕೆಂದರೆ ಆಗ ಕಾಮಪ್ರವೃತ್ತಿಯು ಅತ್ಯಂತ ಜಾಗೃತವಾಗಿರುತ್ತದೆ. ಈ ಕಾಮಪ್ರವೃತ್ತಿಯ ಆಧಾರದ ಮೇಲೆಯೇ **ಫ್ರಾಯಿಡನು** ತನ್ನ ಮನೋವಿಜ್ಞಾನ ಶಾಸ್ತ್ರವನ್ನು ನಿರ್ಮಿಸಿದ್ದಾನೆ. ಕೈಕೊಂಡ ನಿಯಮಗಳನ್ನು ಕೊನೆಯವರೆಗೆ ಮುಟ್ಟಿಸುವನೆಂಬ ಜಿಗುಟತನಬೇಕು ಮನುಷ್ಯನಿಗೆ.

*ಅನಾರಂ ಭೋಹಿಕಾರ್ಯಾಣಾಂಪ್ರಥಮಂಬುದ್ಧಿ ಲಕ್ಷಣಂ*
*ಆರಬ್ಧ ಸ್ಯಾಂತಗಮನಂ ದ್ವಿತೀಯಂ ಬುದ್ಧಿಲಕ್ಷಣಂ*
*ವಿಘ್ನೈಃ ಪುನಃಪುನರಪಿ ಪ್ರತಿಹನ್ಯಮಾನಾಃ ॥*
*ಪ್ರಾರಬ್ಧ ಮುತ್ತಮಜನಾ ನ ಪರಿತ್ಯಜಂತಿ ॥*

ಮಾನವನು ತನ್ನ ಜೀವನದುದ್ದಕ್ಕೂ ಗಳಿಸಬೇಕಾದ ಸಂಗತಿಗಳು ಸಾಕಷ್ಟಿವೆ. ಅವುಗಳಲ್ಲಿ ಅವನಿಗೆ ಪ್ರಾಣ ಹೋಗುವ ಪ್ರಸಂಗ ಒದಗಿದರೂ 'ನನಗಿಲ್ಲ, ಕೊಡು' ಎಂದು ಬೇಡಿಕೊಳ್ಳದಿರುವ ಧೈರ್ಯವು ಬೇಕು. ಬೇಡುವುದು ಹೇಡಿತನದ ಆದರ್ಶವು; ಮಾಡುವುದು ಪರಶಿವನ ಒಲುಮೆಯಹುದು. ಬೇಡಿದರೆ ನೀಡಿದಷ್ಟು ಸಿಗುವುದು; ಮಾಡಿದರೆ ಮಾಟಕ್ಕೆ ಸರಿಯಾದುದೆಲ್ಲವೂ ದೊರೆಯುವುದು. ಆದ್ದರಿಂದ ಬೇಡಿ ಕಲಿಯದೆ, ಬೇಡಿ ಬಾಯಿಯನ್ನು ಹೊಲಸು ಮಾಡಿಕೊಳ್ಳದೆ, ಮಾಡಬಯಸಬೇಕು; ಮಾಡಿ ಕೈಯನ್ನು ಹುಲಸು ಮಾಡಿಕೊಳ್ಳಬೇಕು ಅಸತ್ಯವನ್ನು ಎಲ್ಲಿಯೂ ಯಾವ ಕಾಲಕ್ಕೂ ಬಳಸದೆ ಸತ್ಯವನ್ನೇ ಎದುರಿಟ್ಟು ನಡೆಯಬೇಕು. ಎಂದೆಂದಿಗೂ ಮಾಸದಿದ್ದ ಶುಭ್ರವಾದ ಯಶಸ್ಸನ್ನು ಪಡೆಯಬೇಕು. ಶಾಂತಚಿತ್ತರಾದ ಮಹಾಮಹಿಮರು ಮೆಚ್ಚುವ ನಡೆತೆಯನ್ನಿಟ್ಟುಕೊಳ್ಳಬೇಕು. ಒಳ್ನುಡಿಗಳೇ ಮಾನವನಿಗೆ ಆಭರಣಗಳು. ಅನುಭವದ ಮಾತುಗಳನ್ನು ಆಲಸಿಕೆಯಿಲ್ಲದೆ ಕೇಳಬೇಕು. ಘನವಾದ ಉದ್ದೇಶದಿಂದ ಕೂಡಿದ ಬಯಕೆಯು ಕೈಗೂಡಬೇಕು. ತಪೋನುಷ್ಠಾನ ಮುಂತಾದ ಸಾಧಕ ಜೀವನಕ್ಕೆ ಸಿಟ್ಟು ತರವಲ್ಲ. ಅದು ಅಂಟಿಕೊಳ್ಳದಂತಿರಬೇಕು. ಪರಸ್ತ್ರೀಯರನ್ನು ಕಂಡು ಮನವು ಅಳೆಯಾಸೆಗೊಳ್ಳಕೂಡದು. ಅದಕ್ಕಾಗಿ ಇಂದ್ರಿಯಗಳನ್ನು ಸ್ವಾಧೀನದಲ್ಲಿಟ್ಟುಕೊಳ್ಳಬೇಕು. ಜೀವನದಲ್ಲಿ ಈತಿಬಾಧೆಗಳ ಸೋಂಕಿಗೆ ಈಡಾಗದಂತಿರಬೇಕು ಅದುವೇ ಶ್ರೇಷ್ಠವಾದ ಸುಖಜೀವನ. ಆಶ್ರಯ ಧರ್ಮವನ್ನು ಸರಿಯಾಗಿ ನಡೆಸಬೇಕೆಂಬ ವಂಚನೆಯಿಲ್ಲದ ಲವಲವಿಕೆ

'ನಗುವುದೊಂದು ಭೋಗ, ನಗಿಸುವುದು ಯೋಗ, ನಗದೇ ಇರುವುದೊಂದು ರೋಗ' - ಡಾ. ದಿಲ್‌ಷಾದ್





ಯಿರಬೇಕು. ದೇವನನ್ನು ಮೊರೆಹೊಕ್ಕು ಬೇಡುಕೊಳ್ಳಬೇಕೆಂಬ ಹಂಬಲವುಳ್ಳವರು ಈ ಮಾತುಗಳನ್ನು ಜ್ಞಾಪಕದಲ್ಲಿಟ್ಟುಕೊಳ್ಳಬೇಕು- ಎಂದು ನಿಜಗುಣ ಶಿವಯೋಗಿಗಳ ಬೋಧೆ. ಮಾನವನು ತನ್ನ ಹಾಗೂ ಮಾನವ ಸಮಾಜದ ಉನ್ನತಿಯು ಯಾವ ಗುಣಗಳಿಂದ ಯಾವ ಆಚರಣೆಗಳಿಂದ ಸಾಧ್ಯವೋ ಅವುಗಳನ್ನೇ ದೇವರಲ್ಲಿ ಬೇಡಬೇಕೆಂದು ಹೇಳುತ್ತ, ಕೊನೆಯಲ್ಲಿ 'ಧರೆಯೊಳತ್ಯಧಿಕ ಶಾಂತಿ ಮತವನು' ಬೇಡಿಕೊಳ್ಳಬೇಕೆಂದು ನಿಜಗುಣ ಶಿವಯೋಗಿಗಳು ನಮ್ಮೆಲ್ಲರಿಗೆ ಬೋಧಿಸುತ್ತಾರೆ.

ಜಗತ್ತಿನಲ್ಲಿ ಅತ್ಯಮೂಲ್ಯವಾದ ವಸ್ತುವಾವುದು? ಅದು ಶಾಂತಿ! ಇಂದು ಈ ಶಾಂತಿಯು ಕೇವಲ ವೈಯಕ್ತಿಕ ಜೀವನಕ್ಕಷ್ಟೇ ಅಗತ್ಯವಾಗಿರದೆ, ಒಂದು ಕುಟುಂಬಜೀವನಕ್ಕೆ ಮಾತ್ರ ಅವಶ್ಯವಾಗಿರದೆ, ರಾಷ್ಟ್ರೀಯ ಜೀವನಕ್ಕೂ ಅಂತರ್ ರಾಷ್ಟ್ರೀಯ ಜೀವನಕ್ಕೂ ಬಿಡಲಾರದ ಅಗತ್ಯವಾಗಿದೆ. ಶಾಂತಿ ಆಧ್ಯಾತ್ಮಜೀವಿಗಳ ಆಹಾರ ಎಂಬ ತಿಳುವಳಿಕೆ ಒಂದು ಕಾಲಕ್ಕೆ ಇತ್ತು. ಅದು ಕೈಸಾಗದ ಕೈಯಿಂದಾಗದ ಒಬ್ಬ ವ್ಯಕ್ತಿಯು ಹೊಂದಬೇಕಾದ ವಸ್ತುವೆಂಬ ಭಾವನೆ ಬಹು ಜನರಿಗಿತ್ತು. ಆದರೆ ಜಗತ್ತಿನ ಇಂದಿನ ಪರಿಸ್ಥಿತಿಯಲ್ಲಿ ಶಾಂತಿಯು (ಪಡುವಣದವರಿಗೂ ಮೂಡಣದವರಿಗೂ) ಪ್ರತಿಯೊಬ್ಬನಿಗೂ ಅವಶ್ಯವಾಗಿದೆ. ಶಾಂತಿಯು ಎಲ್ಲಿ ಇರುತ್ತದೆ ಎಂದು ಕೇಳಿದ್ದಕ್ಕೆ ಪ್ರಖ್ಯಾತ ವಿಜ್ಞಾನಿ ಐನ್‌ಸ್ಟೀನನು ನಿನ್ನಲ್ಲಿಯೆ ಇರುತ್ತದೆ ಎಂದು ಹೇಳಿದನಂತೆ! ಮಂತ್ರದ ಕೊನೆಗೆ 'ಓಂ ಶಾಂತಿಃ ಶಾಂತಿಃ ಶಾಂತಿಃ' ಎಂದು ಹೇಳುವ ಭಾರತೀಯರು ಆ ಶಾಂತಿಯು ಸುಷುಪ್ತಿಯಲ್ಲಿ ಇರುತ್ತದೆಂದು ಹೇಳುತ್ತಾರೆ. ಆ ಸುಷುಪ್ತಿಯಲ್ಲಿ ವೃತ್ತಿಗಳು ಲಯವಾಗುವ ಕಾರಣ ನಿಸರ್ಗದಲ್ಲಿ ಆಗುವ ಶಾಂತಿಯನ್ನು ನಿನ್ನಲ್ಲಿಯೇ ಕಾಣುವಿ ಎಂಬುದೇ ಶಾಂತಿ ಮಂತ್ರದ ಉದ್ದೇಶವಾಗಿದೆ. ಆ್ಯಟಂಬಾಂಬು, ಹೈಡ್ರೋಜನ್ ಬಾಂಬು, ಅಂತರಿಕ್ಷ ಕ್ಷಿಪಣಿ ಮುಂತಾದ ವಿಧ್ವಂಸಕ ಶಸ್ತ್ರಗಳ ಶೋಧನೆಯಿಂದ ಇಂದು ಇಡಿಯ ವಿಶ್ವವೇ ಒಂದು ಭೀಕರವಾದ ಶಸ್ತ್ರಗಳ ಶೋಧನೆಯಿಂದ ಇಂದು ಇಡಿಯ ವಿಶ್ವವೇ ಒಂದು ಭೀಕರವಾದ ಪರಿಸ್ಥಿತಿಯಲ್ಲಿ ನಿಂತಂತಿದೆ. ಹೀಗೆ ಆ ಜಗತ್ತು ಶಾಂತಿಗಾಗಿ ಇಂದು ಬಾಯಿಬಿಡುತ್ತಲಿದೆ ಶಾಂತಿಮತ ಸ್ಥಾಪನೆಯ ಹೊರತು ಜಗತ್ತಿಗೆ ಉಳಿಗಾಲವಿರುವಂತೆ ಕಾಣುವುದಿಲ್ಲ. ಇಲ್ಲಿಯವರೆಗೆ ಈ ವಿಶ್ವಶಾಂತಿಗಾಗಿ ಅನೇಕ ಪ್ರಯತ್ನಗಳು ನಡೆದವು; ಆದರೆ ಅದರಲ್ಲಿ ಒಂದೂ ಫಲಕಾರಿಯಾಗಿಲ್ಲ. ಆ ಪ್ರಯತ್ನಗಳು ಕೇವಲ ಬಾಹ್ಯಸ್ಥಿತಿಯನ್ನು ಸುಧಾರಿಸುವ ದಿಶೆಯಲ್ಲಿ ನಡೆದವು, ನಡೆಯುತ್ತಿವೆ. ಆದರೆ ಶಾಂತಿಯು ಬಾಹ್ಯಸ್ಥಿತಿಯಲ್ಲಿ ಪರಿಣಮಿಸಬಹುದಾದ ಮಾರ್ಪಾಟಿನ ಮೇಲೆ ನಿಂತಿಲ್ಲ. ಅದು ಹೊರಗಿನ ವಸ್ತುಗಳನ್ನೂ ಅವಲಂಬಿಸಿರುವುದಿಲ್ಲ. ಎಲ್ಲಿಯವರೆಗೆ ಮಾನವನು ಮಾನವನೇ ಆಗಿ, ಮಾನವದೃಷ್ಟಿಯಿಂದಲೇ ಅದಕ್ಕಾಗಿ ಪ್ರಯತ್ನ ಮಾಡುವನೋ ಅಲ್ಲಿಯವರೆಗೆ ಸ್ಥಾಯಿಯಾದ ಶಾಂತಿಯು ಸಾಧ್ಯವಿಲ್ಲ. ಮಾನವನ ಸ್ವಭಾವವು ಮಾನವ ಸ್ವಭಾವವೇ ಆಗಿದೆ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ, ಇಷ್ಟು ಬಿಟ್ಟರೆ ಮತ್ತೇನಿದೆ ಅವನ ಜೀವನದಲ್ಲಿ? ಮುಖ್ಯಘಟಕಗಳಾಗಿದ್ದ ಈ ಅರಿಷಡ್ವರ್ಗವಿಲ್ಲದಿದ್ದರೆ ಇಂದು ಮಾನವ ಜೀವನವೇ ಇಲ್ಲ. ಇವನ್ನು ಇದ್ದಕ್ಕಿದ್ದಂತೆ ಉಪಯೋಗಿಸಿದರೆ ಅದು ಮಾನವ ಜೀವನವೇ ಅಲ್ಲ. ಮಾನವನು ಈಗ ತಾನಿದ್ದ ಸ್ಥಿತಿಯಲ್ಲಿಯೇ ಇದ್ದುಕೊಂಡು ಶಾಂತಿಸ್ಥಾಪನೆ ಯನ್ನು ಮಾಡಹೊರಟರೆ ಅದು ಸಾಧ್ಯವೇ? ಇಲ್ಲ, ಎಂದಿಗೂ ಸಾಧ್ಯವಿಲ್ಲ. ಮಾನವ ಸ್ವಭಾವವು ಕೊಂಚಮಟ್ಟಿಗಾದರೂ ದೈವೀ ಸ್ವಭಾವವಾಗಿ ಮಾರ್ಪಟ್ಟ ಹೊರತು ಸ್ಥಾಯೀ ಶಾಂತಿಯು ಸಿಗಲು ಸಾಧ್ಯವೇ? ಇದ್ದ ಸ್ವಭಾವದಲ್ಲಿ ಎಷ್ಟೇ ವಿಜ್ಞಾನದ ಪ್ರಗತಿಯಾದರೂ ಅದರಿಂದ ಶಾಂತಿ ಎಂದೂ ಸಿಗುವ ಸಾಧ್ಯತೆಯಿಲ್ಲ. ಇಂಥ ಪರಿವರ್ತನೆಗಾಗಿ ಇಲ್ಲಿ ನಾವು ಆ ಪ್ರಭುಶಕ್ತಿಯನ್ನು ಆಹ್ವಾನಿಸಬೇಕು. ಆ ಪ್ರಭು ಶಕ್ತಿಯೇ ಶಾಂತಿಯನ್ನು ಸ್ಥಾಪಿಸಲು ನಮಗೆ ಸಹಾಯ ಮಾಡುವುದಲ್ಲದೆ, ಬೇರಾವುದೂ ಮಾಡಲಾರದು, ಪ್ರಾರ್ಥನೆಯಿಂದ ಶಕ್ತಿಸಂಪಾದನೆಯಾಗುತ್ತದೆ. ಆ ಶಕ್ತಿ ಸಂಪಾದನೆ ಗಾಗಿ ಪ್ರಾರ್ಥನೆಯನ್ನು ಮಾಡಬೇಕು. ಈ ಪ್ರಾರ್ಥನಾಯೋಗದಲ್ಲಿ ಆ ಪ್ರಭುಶಕ್ತಿ ಯನ್ನು ಆಹ್ವಾನಿಸಿ ಈ ಮಹತ್ಕಾರ್ಯವನ್ನು ಮಾಡುವುದೇ ಜೀವನದ ಸರ್ವೋತ್ಕೃಷ್ಟವಾದ ಧ್ಯೇಯವಾಗಿದೆ. —ಮುಂದುವರಿಯುತ್ತದೆ.

**ಜೂನ್ ತಿಂಗಳ ಪತ್ರಿಕೆಯ ಪುಟ ೫ರಲ್ಲಿ ನವಕಲ್ಯಾಣ ಮಠದ ಪೂಜ್ಯ ಶ್ರೀ ಕುಮಾರಸ್ವಾಮಿಗಳವರ ಲೇಖನದ ವಿಳಾಸ ತಪ್ಪಾಗಿ ಮುದ್ರಿತವಾಗಿದ್ದು ಅದಕ್ಕೆ ವಿಷಾಧಿಸುತ್ತ ಈಗ ಅದರ ಸರಿಯಾದ ವಿಳಾಸವನ್ನು ಇಲ್ಲಿ ಕೊಡಲಾಗಿದೆ.**

'ನಮ್ಮ ಜೀವನದ ಬಹುತರ ಎಲ್ಲ ಸಮಸ್ಯೆಗಳಿಗೆ ಸತ್ಸಂಗದಲ್ಲಿ ಪರಿಹಾರವಿದೆ' -ಪೂಜ್ಯ ಶ್ರೀ ಸಿದ್ಧೇಶ್ವರಸ್ವಾಮಿಗಳು









# ದ್ವಾಸುಪರ್ಣಾ

–ಶ್ರೀ ಸಿದ್ಧೇಶ್ವರ ಸ್ವಾಮಿಗಳು*

**ನೂ**ರಾರು ಜನ ಸಂತರು ಶರಣರು ದೇವನನ್ನು ವರ್ಣಿಸಿದ್ದಾರೆ; ದೇವನನ್ನು ನೇರವಾಗಿ ವರ್ಣಿಸುವ ಬದಲು ಉಪಮೆ, ದೃಷ್ಟಾಂತಗಳಿಂದ ಕೇಳುಗನ ಮನಸ್ಸಿನ ಮೇಲೆ ಬಿಂಬಿಸುವಂತೆ ಉಪದೇಶಿಸಿದ್ದಾರೆ. ಹೇಳುವ ಮಾತು ಕೇಳುಗನ ಮನಸ್ಸಿನ ಮೇಲೆ ಸ್ಪಷ್ಟವಾಗಿ ಮೂಡಬೇಕಾದರೆ, ಈ ಅಲಂಕರಣದ ಭಾಷೆ ಅವಶ್ಯ! ಉದಾಹರಣೆಗಾಗಿ ಶಂಕರಾಚಾರ್ಯರಿಗೆ ಜಗತ್ತು ಮಿಥ್ಯೆಯಾಗಿದೆ ಎಂದು ಕಂಡು ಬಂತು. ಆದರೆ ಅದನ್ನು ತಿಳಿಸುವುದು ಹೇಗೆ? ಒಂದು ವಸ್ತು ಸತ್ಯವಾದರೂ ಆಗಿರಬೇಕು. ಅಸತ್ಯವಾದರೂ ಆಗಿರಬೇಕು. ಎರಡೂ ಅಲ್ಲ ಎನ್ನುವುದನ್ನು ತಿಳಿಸುವುದು ಹೇಗೆ ? ಅಂಥ ಕಲ್ಪನೆ ಹೇಗೆ ಮಾಡುವುದು? ಅದಕ್ಕಾಗಿ ಅವರು ದೃಷ್ಟಾಂತ ರೂಪಕ ಬಳಸಿದರು. ಅದೇ ಹಗ್ಗ–ಹಾವು, ಹಗ್ಗದಲ್ಲಿ ಹಾವಿನ ಭಾಸ. ಭ್ರಾಂತಿಯ ಹಾವಿನ ಅಸ್ತಿತ್ವ ಎಂಥದು? ಅದು ಹಗ್ಗದಂತೆ ಸತ್ಯವಲ್ಲ. ಎಂದೂ ಇಲ್ಲದ ವಸ್ತುವಿನಂತೆ ಅಸತ್ಯವಲ್ಲ. ಅಂದರೆ ಹಾವು ಸದಸತ್–ವಿಲಕ್ಷಣ. ಹಾಗೆ ಜಗತ್ತಿನ ಅಸ್ತಿತ್ವವೂ ಸಹ. ಈ ದೃಷ್ಟಾಂತವು ಸೂಕ್ಷ್ಮ ಕಲ್ಪನೆಯನ್ನು ಸ್ಫುಟಗೊಳಿಸುತ್ತದೆ.

ಅಸತ್ಯ ಎಂದರೆ ಎಂದೂ ಇಲ್ಲದಿರುವುದು. ಉದಾ: ಗೋಲಾದಚೌಕ. ಚೌಕಾದ ತ್ರಿಕೋನ ಇತ್ಯಾದಿ. ಗೋಲಾದ ಚೌಕ ಅನ್ನುವುದು ಶಬ್ದ ಮಾತ್ರ, ವಸ್ತುಶೂನ್ಯ. ಕೇವಲ ವಿಕಲ್ಪ. ಶಾಬ್ದಿಕ ಅರ್ಥ ಇದೆ. ಆದರೆ ವಸ್ತು ಇಲ್ಲ. ವಸ್ತು ಇರದೆ ಕೇವಲ ಶಾಬ್ದಿಕವಾಗಿ ಒಂದು ವಸ್ತು ಇದ್ದರೆ ಅದು ಅಸತ್ಯ. ಹಾವು ಹಾಗೆ ಅಸತ್ಯವಲ್ಲ, ಅದು ಕಾಣುತ್ತದೆ. ಆದರೆ ಸ್ಫುಟವಾದ ದೃಶ್ಯವಸ್ತುಗಳಂತೆ ಸತ್ಯವೂ ಅಲ್ಲ.

ಈ ಜಗತ್ತು ಸತ್ಯವೂ ಅಲ್ಲ, ಅಸತ್ಯವೂ ಅಲ್ಲ. ಈ ಜಗತ್ತು ಸಂಪೂರ್ಣವಾಗಿ ಇಲ್ಲ ಎಂದಲ್ಲ, ಅಥವಾ ಶಾಶ್ವತವಾಗಿ ಇದೆ ಎಂತಲೂ ಅಲ್ಲ. ಸತ್= ಶಾಶ್ವತ ವಸ್ತು ಅಲ್ಲದ್ದರಿಂದ ಸದ್‌ವಿಲಕ್ಷಣ. ಇಲ್ಲದ ವಸ್ತುವಿನಂತೆ ಇಲ್ಲವಾದುದಲ್ಲವಾದುದರಿಂದ ಅಸದ್ ವಿಲಕ್ಷಣ. ಹಾಗೆ ಸತ್ಯಕ್ಕೆ ಅಸತ್ಯಕ್ಕೆ ವಿಲಕ್ಷಣವಾದ ಅಸ್ತಿತ್ವವನ್ನು ಶಂಕರರು ಜಗತ್ತಿಗೆ ಕಲ್ಪಿಸಿದರು. ಈ ಅಸ್ತಿತ್ವವನ್ನು ನಮ್ಮ ಗಮನಕ್ಕೆ ತರುವುದಕ್ಕಾಗಿ ಯೋಗ್ಯ ಹಾಗೂ ಸಮರ್ಥ ದೃಷ್ಟಾಂತ ಬಳಸಿದರು. ಈ ಜಗತ್ತು ಬರೀ ತೋರಿಕೆಯಲ್ಲಿದೆ ನೈಜವಾಗಿಲ್ಲ ಎಂಬ ಮಾತನ್ನು ಮನ ಮುಟ್ಟುವ ಹಾಗೆ ಹೇಳಿದರು.

ಪರದೇಶದಲ್ಲೂ ಇಂಥ ಚಿಂತನೆಯಿದೆ. ವಸ್ತುವಿನಲ್ಲಿ ಗುಣಗಳಿವೆ. ಗುಣಗಳಿಗೆ ಆಧಾರವಾಗಿ ಒಂದು ಮೂಲ ಸತ್ ಇದೆ. ಅದು ಸಬ್ಸ್ಟನ್ಸ್. ಗುಣಸಮುದಾಯದ ತೋರಿಕೆ ಅಪಿಯರೆನ್ಸ್. ಇರುವ ಅಸ್ತಿತ್ವ ಕಾಣದು, ಕಾಣುವ ತೋರಿಕೆ ಇರದು. ಏನು ಇದೆ ಅದು ಕಾಣಿಸುವುದಿಲ್ಲ. ಏನು ಇಲ್ಲ ಅದು ಕಾಣಿಸುತ್ತದೆ. ಹೂವಿನ ಸಬ್ಸ್ಟನ್ಸ್ ಇದೆ; ಕಾಣಿಸದು. ಗುಣ ಸಮುದಾಯ ಅಸತ್! ಸ್ವ ಅಸ್ತಿತ್ವ ರಹಿತ. ಆದರೆ ಅದು ಕಾಣಿಸುವುದು. ವಿಜ್ಞಾನಿಯೂ ಇಂಥದೇ ಮಾತನ್ನು ಹೇಳುತ್ತಾನೆ. ಟೇಬಲ್ ಎನ್ನುವುದು ಪ್ರಚಂಡ ಸಂಖ್ಯೆಯ ಅಣುಸಮೂಹ ಅಷ್ಟೆ ನಮಗೆ ತೋರುವ ಟೇಬಲ್ ಕೇವಲ ತೋರಿಕೆ ಅಷ್ಟೆ ಅಂದರೆ ಟೇಬಲ್ ಇದೆ ಎಂದಲ್ಲ. ಇಲ್ಲವೆಂತಲೂ ಅಲ್ಲ. ಇನ್ನೊಂದು ಉದಾಹರಣೆ ನೋಡಿ. ನೀರಿನಲ್ಲಿ ಹೆಚ್ ಮತ್ತು ಓ ಮೂಲ ಘಟಕ. ಅವು ಅಣುಗಳು. ಅಣುಗಳು ಶಕ್ತಿಯ ಗುಳ್ಳೆಗಳು. ಅವು ಇವೆ. ಆದರೆ ಅವುಗಳ ಸಮೂಹದಲ್ಲಿ ತೋರಿದ 'ನೀರು' ಎನ್ನುವುದು ನಮ್ಮ ಅನುಭವಕ್ಕೆ ಬರುವ ಪ್ರಿಯವಸ್ತು. ಆದರೆ ಅದರಲ್ಲಿರುವುದೆಲ್ಲ ಬರೀ ಶಕ್ತಿ!! ನೀರು ಇದೆ ಎಂದರೆ ಇದೆ; ಇಲ್ಲವೆಂದರೆ ಇಲ್ಲ. ಎಲ್ಲವೂ ಹೀಗೆಯೇ. ಆದ್ದರಿಂದ ಶಂಕರರು ಜಗತ್ತನ್ನು 'ಮಾಯಿಕ' ಎಂದು ವರ್ಣಿಸಿದರು ದೃಷ್ಟಾಂತದ ಮೂಲಕ!.

ಬಸವಣ್ಣನವರು ಹೇಳುತ್ತಾರೆ.

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

'ಸಮುದಾಯಗಳು ವ್ಯಕ್ತಿಗಳಿಗಿಂದ, ಗುಂಪು ಜನರಿಂದ ರೂಪ ಪಡೆದಿರುತ್ತವೆ' – ಡಾ|| ಗುರುಪಾದ ಮರಿಗುದ್ದಿ









*ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ*
*ಅಂಬುಜಕೆ ಭಾನುವಿನ ಉದಯದ ಚಿಂತೆ*
*ಭ್ರಮರಂಗೆ ಪರಿಮಳದ ಬಂಡುಂಬ ಚಿಂತೆ*
*ಎನಗೆ ನಮ್ಮ ಕೂಡಲಸಂಗಮದೇವರ ನೆನೆವುದೆ ಚಿಂತೆ*

ಚಕೋರ ಪಕ್ಷಿ ಹೇಗೆ ಚಂದ್ರಮನ ಚಿಂತಿಸುತ್ತದೆಯೋ ಅಂಬುಜ ಭಾನುವ ಚಿಂತಿಸುವುದೋ ಹಾಗೆ ಬಸವಣ್ಣನವರು ದೇವನ ನೆನೆಸುತ್ತಾರೆ. ದೃಷ್ಟಾಂತಗಳು ಹೇಳಬೇಕಾದ್ದನ್ನು ಸ್ಪಷ್ಟಪಡಿಸುತ್ತವೆ.

ಬಂಧನಕ್ಕೆ ಬಂದ ಗಿಳಿ ತನ್ನ ಬಂಧುಗಳ ನೆನೆಸುತ್ತದೆ. ಸುಂದರವಾದ ಪಂಜರ, ಅದರೊಳಗೆ ಗಿಳಿ. ಅದಕ್ಕೆ ಹಣ್ಣು ಹಂಪಲು, ನೀರು; ಎಲ್ಲ ಕೊಡುತ್ತೇವೆ, ಪ್ರೀತಿಸುತ್ತೇವೆ; ಆದರೆ ಅದನ್ನೆಲ್ಲಾ ಅನುಭವಿಸಿಯೂ ತನ್ನ ಹೃದಯದಲ್ಲಿ ಗಿಳಿ ಅರಣ್ಯವನ್ನು ನೆನೆಸುತ್ತದೆ. ಮಾವಿನ ಮರದಲ್ಲಿ ಕುಳಿತು ತನ್ನ ಬಂಧು ಬಾಂಧವರನ್ನು ನೆನೆಸುತ್ತದೆ. ಹಾಗೆ ಬಸವಣ್ಣನವರು ಎಲ್ಲದರ 'ಮಧ್ಯ' ಪ್ರೇಮಪಂಜರದ ಮಧ್ಯೆ ಕೂಡಲಸಂಗಮನನ್ನು ನೆನೆಸುತ್ತಾ ಇದ್ದರು. ಒಂದು ವೇಳೆ ದೃಷ್ಟಾಂತ ಬಳಸದಿದ್ದರೆ ಬಸವಣ್ಣನವರ ಭಾವ ತೀವ್ರತೆ ನಮಗೆ ಗೊತ್ತಾಗುತ್ತಿರಲಿಲ್ಲ. ಆದ್ದರಿಂದ ಆಧ್ಯಾತ್ಮ ಸಾಹಿತ್ಯದೊಳಗೆ ದೃಷ್ಟಾಂತ ಬಳಸುವ ಪದ್ಧತಿ ಬಹಳ ಬಳಕೆಗೆ ಬಂತು. ಬಹಳ ಪರಿಣಾಮ ಕಾರಿಯಾಗಿ ಬಳಸಿದರು. ಅದು ಅವರ ಅತ್ಯಂತ ಸೂಕ್ಷ್ಮವಾದ ಆಲೋಚನೆಗಳನ್ನು, ಭಾವನೆಗಳನ್ನು ಸ್ಪಷ್ಟವಾಗಿ ಚಿತ್ರಿಸಿತು.

ಭಗವಂತ ಅಂದರೇನು? ಜೀವ ಅಂದರೇನು ? ಇದನ್ನು ಚಿತ್ರಿಸುವುದಕ್ಕಾಗಿ ಉಪನಿಷತ್ತು ಒಂದು ಸುಂದರ ದೃಷ್ಟಾಂತ ಬಳಸಿದೆ

*ದ್ವಾ ಸುಪರ್ಣಾ ಸಯುಜಾ ಸಖಾಯಾ*
*ಸಮಾನಂ ವೃಕ್ಷಂ ಪರಿಷಸ್ವಜಾತೇ*
*ತಯೋರೇಕಃ ಪಿಪ್ಪಲಂ ಸ್ವಾದ್ವ*
*ತ್ತ್ಯನಶ್ನನ್ನನ್ಯೋ ಅಭಿಚಾಕಶೀತಿ*

ನಾಲ್ಕು ಸಾಲುಗಳಲ್ಲಿ ಈ ಜಗತ್ತು ಜೀವ, ಈಶ ಹಾಗೂ ಅವರ ಸ್ಥಿತಿ ಅದ್ಭುತವಾಗಿ ಚಿತ್ರಿತವಾಗಿದೆ. ಗ್ರಂಥ ಬರೆದು ತಿಳಿಸಿದರೂ ಸ್ಪಷ್ಟವಾಗದ ಕಲ್ಪನೆಗಳನ್ನು ಸುಲಭ ದೃಷ್ಟಾಂತಗಳ ಮೂಲಕ ರೇಖಿಸಿದ್ದಾರೆ!

ಒಂದು ಗಿಡ, ಹಣ್ಣಿನ ಗಿಡ. ಅದು ವಿಶಾಲವಾಗಿ ಹರವಿಕೊಂಡಿದೆ. ಶಾಖೆಶಾಖೆಗಳು. ಅಲ್ಲಿ ಸಾವಿರ ಸಾವಿರ ಹಣ್ಣುಗಳು. ಇಂತಹ ವೃಕ್ಷದಲ್ಲಿ ಒಂದು ಪಕ್ಷಿ ಕುಳಿತಿದೆ. ಆ ಪಕ್ಷಿ ಕುಳಿತ ಶಾಖೆಯ ಕೆಳಗಿನ ಶಾಖೆಯಲ್ಲಿ ಇನ್ನೊಂದು ಪಕ್ಷಿ ಕುಳಿತಿದೆ. ಈ ಪಕ್ಷಿ ಹಣ್ಣು ತಿನ್ನುತ್ತಿದೆ. ಮೇಲಿನ ಪಕ್ಷಿ ಏನನ್ನೂ ತಿನ್ನದೇ ಬರೀ ಪ್ರಕಾಶ ಚೆಲ್ಲುತ್ತಿದೆ. ಆ ಪಕ್ಷಿಯ ಪ್ರಕಾಶದೊಳಗೆ ಗಿಡ ಕಾಣಿಸುತ್ತದೆ. ಅಲ್ಲಿರುವ ಹಣ್ಣುಗಳು ಕಾಣುತ್ತವೆ. ಕೆಳಗಿರುವ ಪಕ್ಷಿ ಕಾಣುತ್ತದೆ. ಆ ಪಕ್ಷಿಯ ಬೆಳಕಿ ನೊಳಗೆ ಈ ಕೆಳಗಿನ ಪಕ್ಷಿ ಹಣ್ಣುಗಳನ್ನು ತಿನ್ನುವುದರಲ್ಲಿ ಮಗ್ನವಾಗಿದೆ. ಈ ಪಕ್ಷಿಗೆ, ಆ ಪಕ್ಷಿಗೆ ಅತ್ಯಂತ ಮೈತ್ರಿ, ಬಿಟ್ಟಿರದಷ್ಟು ಗಾಢ ಮೈತ್ರಿ. ಎರಡೂ ಕೂಡಿಯೇ ಇರುತ್ತವೆ. ಆದರೆ ಸ್ವಭಾವ ಭಿನ್ನ. ಮೇಲಿನದು ಪ್ರಕಾಶ ಮಾಡುತ್ತದೆ. ಕೆಳಗಿನದು ತಿನ್ನುವಲ್ಲಿ ಮಗ್ನ. ಒಂದೇ ವೃಕ್ಷದಲ್ಲಿ ಅವು ಆಶ್ರಯ ಪಡೆದಿವೆ. ಅಲ್ಲಿ ಇರುವ ಹಣ್ಣುಗಳು ಸುರುಚಿ. ಆ ಪಕ್ಷಿ ತನ್ನನ್ನೇ ಮರೆತು ಹಣ್ಣನ್ನು ತಿನ್ನುವಲ್ಲಿ ಮೈಮರೆತು ಇರಬೇಕಾದರೆ ಆ ಹಣ್ಣಿನ ರಸವೆಷ್ಟು ಸಿಹಿ ಇರಬೇಡ! ಹಣ್ಣನ್ನು ತಿನ್ನುವುದರಲ್ಲಿ ಪಕ್ಷಿ ಮೈಮರೆತುಬಿಟ್ಟಿದೆ!

ಮೇಲಿನ ಪಕ್ಷಿಗೆ ಹಣ್ಣನ್ನು ತಿನ್ನುತ್ತಿರುವ ಪಕ್ಷಿ ಕಾಣಿಸುತ್ತದೆ. ಆ ಹಣ್ಣಿನ ರಸವನ್ನು ಹೀರಿ ಸಂತೋಷಪಡುವ ಪಕ್ಷಿ ಕಾಣಿಸುತ್ತದೆ. ಆದರೆ ತಾನು ಮಾತ್ರ ಅದರಂತೆ ಆ ಹಣ್ಣಿಗೆ ಮೋಹಗೊಂಡಿಲ್ಲ. ಇದು ಆ ಪಕ್ಷಿಯ ವಿಶೇಷತೆ. ಸಾಮಾನ್ಯವಾಗಿ ಭೋಗ ದೃಶ್ಯ ಕಂಡು ಮನ ಬಯಸುತ್ತದೆ.

ಬುದ್ಧ, ಮಹಾವೀರ, ಶಂಕರಾಚಾರ್ಯ, ಬಸವಣ್ಣ, ಅಲ್ಲಮ ಪ್ರಭು, ಸಂತರು, ಮಹಾನುಭಾವರು ಬಂದರು. ಎಚ್ಚರಿಸಬೇಕೆಂದು ಪ್ರಯತ್ನಿಸಿದರು. 'ಉತ್ತೀಷ್ಠತ, ಜಾಗ್ರತ, ಪ್ರಾಪ್ಯ ವರಾನ್ನಿಬೋಧತ' ಎಂದರು. ಏಳಿ, ಒಂದಿಷ್ಟು ಕಣ್ಣು ಬಿಟ್ಟು ನೋಡಿ, ಶ್ರೇಷ್ಠರ ಬಲ್ಲವರ ಸಮೀಪ ಹೋಗಿ, ಜೀವನ ಉದ್ದಾರ ಮಾಡಿಕೊಳ್ಳಿ ಎಂದರು. ಇಷ್ಟು ಜನ ಬಂದು

'ಬಸವಣ್ಣನೇ ಧರ್ಮಗುರು, ಕನ್ನಡವೇ ಧರ್ಮಭಾಷೆ, ವಚನಗಳೇ ಧರ್ಮಗ್ರಂಥ, ಇಷ್ಟಲಿಂಗವೇ ಧರ್ಮತತ್ತ್ವ ಲಾಂಛನ' – ಡಾ|| ರಂಜಾನ್ ದರ್ಗಾ

ಹೋದರೂ ನಾವು ಹಾಗೇ ಮಲಗಿದ್ದೇವೆ. ಅವರ ಮಾತುಗಳನ್ನು ಕಂಠಪಾಠ ಮಾಡಿದ್ದೇವೆ. ಅಸ್ಖಲಿತವಾಗಿ ನುಡಿಯುತ್ತೇವೆ. ಆದರೆ ಅಚ್ಚರಿಯೆಂದರೆ ನಾವು ಎದ್ದೇ ಇಲ್ಲ. ನಮ್ಮ ನುಡಿಯೆಲ್ಲ ನಿದ್ರೆಯಲ್ಲಿ, ಹಾಸಿಗೆಯಲ್ಲಿ!

ಒಬ್ಬ ಗುರು, ಗುರುವಿನ ಹತ್ತಿರ ಶಿಷ್ಯ. ಇಬ್ಬರೂ ಕೂಡಿ ಹೊರಟಿದ್ದರು. ಗುರುವಿಗೆ ನೀರಡಿಕೆ, ಶಿಷ್ಯ ನೀರು ತರಲು ಹೋದ. ಶಿಷ್ಯ ಗುರುವನ್ನು ಒಂದು ಮರದ ಕೆಳಗೆ ನೆರಳಲ್ಲಿ ಕೂರಿಸಿ ತಂಬಿಗೆ ತೆಗೆದುಕೊಂಡು ನೀರು ತರಲು ಹೋದ. ಹೋದ, ಬಹಳ ದೂರ ಹೋದ. ಬಾವಿಯ ಹತ್ತಿರ ಒಬ್ಬ ಹೆಣ್ಣು ಮಗಳು. ಸಣ್ಣವಳು. ಆಕೆ ನೀರನ್ನು ಜಗ್ಗುತ್ತಿದ್ದಳು. ಒಳ್ಳೆಯ ನೀರು. ನೀರು ಕುಡಿವ ಬಯಕೆ. ಆಕೆ ಸುರಿದಳು ಬೊಗಸೆಗೆ, ಆ ನೀರಿನಲ್ಲಿ ಆಕೆಯ ಮುಖ! ತಾನು ಗುರುವಿನ ಶಿಷ್ಯ ಎನ್ನುವುದನ್ನು ಮರೆತ. ಗುರುವನ್ನೂ ಮರೆತ. ಆಕೆಯ ಹಿಂದೆ ಹೋದ. ಅವಳ ಮನೆಗೆ ಹೋದ. ಆಕೆಯ ತಂದೆಯನ್ನು ಸಂಧಿಸಿ ಹೇಳಿದ, ತನ್ನ ಮನದ ಇಚ್ಛೆಯನ್ನು! ಶಿಷ್ಯ ಬರುತ್ತಾನೆ, ನೀರು ತರುತ್ತಾನೆ ಎಂದು ಕುಳಿತಿದ್ದಾನೆ ಗುರು. ಶಿಷ್ಯನದು ಸುಂದರ ದೇಹ. ಅವನ ಕಂಡು ಅವನಾಸೆ ತಿಳಿದು ತಂದೆಗೆ ಆನಂದ. ಭಗವಂತನೇ ಕಳುಹಿಸಿಕೊಟ್ಟನು, ಇದು ನಿನ್ನದೇ ಮನೆ. ಇವಳು ನಿನ್ನವಳೇ ಎಂದು ಲಗ್ನ ಮಾಡಿ ಮುಗಿಸಿಬಿಟ್ಟ, ಮಕ್ಕಳಾದವು ಒಂದೆರೆಡಲ್ಲ! ಇನ್ನೂ ನೆನಪಿಲ್ಲ ಗುರುವಿನತ್ತ ಹೋಗಲು. ಇವನನ್ನು ಎಚ್ಚರಿಸಲು ಸಂತರು ಬಂದು ಹೋದರು. ನೆನಪಾಗದು, ಸಂಸಾರ ಹರಿಯದು. ಗುರು ದಾರಿ ಕಾಯುತ್ತಾ ಕುಳಿತಿದ್ದಾನೆ, ಬರುತ್ತಾನೆ ಶಿಷ್ಯ ಎಂದು!

ಅಂತಹ ವಿರಕ್ತ ಶಿಷ್ಯನೇ ಸಿಕ್ಕಿಕೊಂಡ! ಇನ್ನು ಆ ವಿಷಯ ವನ್ನೇ ಹುಡುಕಾಡ ಹೋದವರು? ಆ ಶಿಷ್ಯನ ಹೆಂಡತಿ ಸತ್ತಳು! ಅಷ್ಟು ಸುಂದರ ಹೆಂಡತಿ ಸತ್ತ ಕೂಡಲೇ ವಿರಕ್ತಿ ಬಂತು! ನೆನಪಾಯ್ತು; ಗುರುವನ್ನು ಕೂರಿಸಿ ಬಂದುದು ನೆನಪಾಯ್ತು. ಓಡಿ ಬಂದ; ಗುರು ನಿರೀಕ್ಷೆಯಿಂದ ಅಲ್ಲೇ ಕುಳಿತಿದ್ದ! ಶಿಷ್ಯ ಎಂದಾದರೂ ಬರಲಿ, ಬಂದೇ ಬರುತ್ತಾನೆ ಎಂದು ದಾರಿ ಕಾಯುತ್ತಿದ್ದ ಗುರು, ಅಷ್ಟು ಪ್ರೇಮ ಗುರುವಿನದು!

ಪ್ರಪಂಚದ ಈ ವಿಷಯಗಳನ್ನು ತಿನ್ನುವಾಗ, ಸಂಸಾರ ಮಾಡುವಾಗ, ಮನಸ್ಸು ಇಷ್ಟು ಮರುಳಾಗಿ ಹೋಗುತ್ತದೆ, ಮುಗ್ಧವಾಗಿ ಹೋಗುತ್ತದೆ. ಎಲ್ಲಿ ಭಗವಂತ? ಎಲ್ಲಿ ಸಂತರು? ನಾವು ಕೆಟ್ಟವರಲ್ಲ, ನಾವು ಒಳ್ಳೆಯವರೇ. ಶಿಷ್ಯ ಒಳ್ಳೆಯವನೇ. ಜಗತ್ತಿನ ಮಾಯಾ ಪ್ರಭಾವವೇ ಅಷ್ಟು ಇರುವಾಗ 'ಜಗವ ಸುತ್ತಿರ್ಪುದು ನಿನ್ನಯ ಮಾಯೆ' ಏನು ಮಾಡಲಾದೀತು?

ವಿಷಯ ಫಲ ತಿನ್ನುವಾಗ ಶೋಕವುಂಟಾಗುತ್ತದೆ. ಪ್ರಪಂಚ ಮಾಡುವಾಗ ಒಂದಿಷ್ಟು ಕಷ್ಟ ಬರುತ್ತದೆ. ಶೋಕಗೊಳ್ಳುತ್ತಾನೆ ಮನುಷ್ಯ. ಆ ಶೋಕ ನೀಗಿಸಲು ಇದು ಭಗವತ್ ಚಿಂತನ! ವ್ಯಾಕರಣದ ಚಿಂತನೆಯಲ್ಲ. ಇದು ತರ್ಕದ ಚಿಂತನೆಯಲ್ಲ, ಭಾಷಾ ಚಿಂತನೆಯಲ್ಲ. ನಮ್ಮ ಬದುಕಿನತ್ತ ನೋಡಿಕೊಳ್ಳುವ ಕ್ಷಣ ಇದು. ಬದುಕನ್ನು ಸಮೃದ್ಧಗೊಳಿಸುವ ಪದ್ಧತಿ!

ಮೇಲೆ ಕುಳಿತ ಪಕ್ಷಿ ಸಾಕ್ಷೀಪಕ್ಷಿಯು. ಈ ಜೀವಾತ್ಮ ದೃಷ್ಟಿಯಿಂದ ಭಾವಕ್ಕೆ ಬಂದ ಭಗವಂತ! ನಾನು ಜೀವಪಕ್ಷಿ. ಭಗವಂತನ ದೃಷ್ಟಿಯದು ಸಾಕ್ಷಿ ಪಕ್ಷಿ. ಅಂತಹ ಜ್ಞಾನ ಪಕ್ಷಿ ಜಗತ್ತಿನ ಮೇಲೆ ಜ್ಞಾನದ ಬೆಳಕು ಚೆಲ್ಲಿದೆ. ಹಣ್ಣು ಹಂಪಲುಗಳನ್ನು ಶಬ್ದ, ಸ್ಪರ್ಶ, ರೂಪ, ರಸಾದಿಗಳನ್ನು ಬೆಳಗಿಸುತ್ತದೆ. ಅಂತಹ ಪ್ರಕಾಶ ಚೆಲ್ಲುವ ಭಗವಂತನ ಮೇಲೆ ಶಬ್ದ, ಸ್ಪರ್ಶ, ರೂಪಗಳ ಪ್ರಭಾವ ಇಲ್ಲ. ನಾವು ಆತನನ್ನು ಬಂಗಾರದಲ್ಲಿ ಮುಚ್ಚಿದರೂ ಎಷ್ಟು ವಸ್ತುಗಳನ್ನು ಸಮರ್ಪಿಸಿದರೂ ಭಗವಂತ ಆ ಕಡೆ ನೋಡುವುದಿಲ್ಲ. ನೀವು ಬೇಕಾದರೆ ಸಾದಾ ಅನ್ನ ಅರ್ಪಿಸಿ, ಅಥವಾ ಮೃಷ್ಟಾನ್ನ ಅರ್ಪಣ ಮಾಡಿ, ಯಾವುದನ್ನೂ ಲಿಂಗ ನೋಡುವುದಿಲ್ಲ. ಯಾವಾಗ ಈ ಜೀವ ಮೇಲ್ಮುಖ ಮಾಡಿ ಆ ಸಾಕ್ಷಿಯತ್ತ ಲಕ್ಷ್ಯ ಕೊಡುತ್ತಾನೆಯೋ ಆಗ ಎಲ್ಲೆಡೆ ಹರವಿದ ಪ್ರಕಾಶ ಕಾಣುತ್ತದೆ. ಆ ಪ್ರಕಾಶದ ದರ್ಶನದಿಂದ ಜೀವಪಕ್ಷಿಯ ಮೋಹ ಮರೆಯಾಗುತ್ತದೆ. ಶೋಕ ತಪ್ಪಿ ಹೋಗುತ್ತದೆ. ಜೀವ ಭಾವವು ಹಾರಿ ಹೋಗುತ್ತದೆ. ಆ ಜೀವ ಕಲ್ಪನೆಯೊಂದಿಗೆ ಈಶ ಕಲ್ಪನೆಯೂ ಮರೆಯಾಗುತ್ತದೆ. ಆಗ ಏನು ಉಳಿಯು ವುದೋ ಅದು ಶುದ್ಧ ಭಗವಂತ!

☆

'ಆತ್ಮಜ್ಞಾನಿಗಳಾದವರು ಕೂಡ ಜೀವನದ ಏರಿಳಿತಗಳಲ್ಲಿ ಎಂದಿಗೂ ತಮ್ಮ ತಾಳ್ಮೆಯನ್ನು ಕಳೆದುಕೊಳ್ಳುವುದಿಲ್ಲ'
—ಪೂಜ್ಯ ಶ್ರೀ ಸಿದ್ಧೇಶ್ವರಸ್ವಾಮಿಗಳು





# 'ಆದಿಯನಾದಿಯ ನಿಲವು'

–'ಗುಂಬೀಶಂ' ಪ್ರೊ. ಶಂಕರಗೌಡ ಮ. ಬಿರಾದಾರ*

*'ಬೀಜದ ಮರೆಯಲ್ಲಿ ಅಡಗಿರ್ದ ಅಂಕುರವು*
*ಬಹಿರ್ಗತವಾದಂತೆ,*
*ಮುಗಿಲ ಮರೆಯಲ್ಲಿ ಅಡಗಿರ್ದ*
*ಕ್ಷಣಿತವು ಸ್ಫುರಿಸಿದಂತೆ,*
*ಎನ್ನ ಮನದ ಮಧ್ಯದಲ್ಲಿ ಅಡಗಿರ್ದ ಮಹಾಘನವು*
*ತನ್ನ ಲೀಲೆಯಿಂದ ತಾನೇ ಉದಯವಾಗಲು*
*ನಿಮ್ಮ ಆದಿಯನಾದಿಯ ನಿಲವ ಕಂಡೆನಯ್ಯಾ ಅಖಂಡೇಶ್ವರಾ'*
*–ಷಣ್ಮುಖ ಶಿವಯೋಗಿ*

ಈ ಪ್ರಸ್ತುತ ವಚನಕಾರರಾದ ಶ್ರೀ ಷಣ್ಮುಖ ಶಿವಯೋಗಿಗಳು ಹನ್ನೆರಡನೆಯ ಶತಮಾನದ ಶರಣರ ಸರ್ವ ಲಕ್ಷಣಗಳನ್ನು ಅಳವಡಿಸಿಕೊಂಡು, ಆ ಯುಗದ ವಚನ ಸಾಹಿತ್ಯದ ಸಮಗ್ರ ಸ್ವರೂಪವನ್ನು ಪ್ರತಿನಿಧಿಸುವ ವಚನಗಳನ್ನು ರಚಿಸಿದ ಸ್ವಯಂಜ್ಯೋತಿಯಾಗಿದ್ದಾರೆ. ಬಸವೋತ್ತರ ಯುಗದ ಅತ್ಯಂತ ಮಹತ್ವ ವಚನಕಾರ ರಾಗಿದ್ದಾರೆ. ಇವರ ಕಾಲವನ್ನು ಕ್ರಿ.ಶ. ಸುಮಾರು ೧೭೦೬–೧೭೭೮ರವರೆಗೆ ಎಂದು ಕೆಲವು ವಿದ್ವಾಂಸರ ಅಭಿಪ್ರಾಯ ವಾದರೆ, ಮತ್ತೆ ಕೆಲವರದು ಕ್ರಿ.ಶ. ೧೬೯೦ರಿಂದ ೧೭೭೮ ರವರೆಗೆಂದು ಅಭಿಪ್ರಾಯಪಟ್ಟಿದ್ದಾರೆ. ಇವರ ವಚನಾಂಕಿತವು 'ಅಖಂಡೇಶ್ವರ'ವಾಗಿದ್ದು, ಇವರು ೭೧೭ ವಚನಗಳನ್ನು ರಚಿಸಿದ್ದು ಸ್ಪಷ್ಟವಾಗಿದೆ. ಎಲ್ಲ ವಚನಗಳೂ ಉಪಲಬ್ಧವಿವೆ. ಇದುವಲ್ಲದೆ ೪೧ ಚೌಪದಿಗಳುಳ್ಳ ಅಖಂಡೇಶ್ವರ ಜೋಗುಳ ಪದ, ೭ ಪರಿವರ್ಧಿನಿ ಷಟ್ಪದಿಯುಳ್ಳ ಪಂಚಸಂಜ್ಞೆಗಳ ಮತ್ತು ಭಾಮಿನಿ ಷಟ್ಪದಿಯಲ್ಲಿ ರಚಿತವಾದ ನಿರಾಳ ಸದ್ಗುರು ಸ್ತೋತ್ರ ಇವು ಈಗ ದೊರೆತ ಕೃತಿಗಳು.

ಪ್ರಾಣಲಿಂಗದ ಪ್ರಕಾಶ ಪುಷ್ಪವಾಗಿ ಅರಳಿ ಪರಂ ಜ್ಯೋತಿಯಾಗಿ ಬೆಳಗಿದ ಶ್ರೀ ಷಣ್ಮುಖ ಶಿವಯೋಗಿಗಳು ಗುರು ಅಖಂಡೇಶ್ವರ ಗುರುಕರಸಂಜಾತರು. ಶ್ರೀ ಅಖಂಡೇಶ್ವರರು ಬೆಳಗಾವಿ ಭಾಗದಿಂದ ಬಂದವರೆಂದು ಪ್ರತೀತಿಯುಂಟು ಕಲ್ಯಾಣವನ್ನು ಕಾಣಲು ಹೊರಟ ಅವರು ಜೇವರಗಿಯ ಜನರ ಭಕ್ತಿಗೆ ಒಲಿದು ಅಲ್ಲಿಯೇ ನೆಲೆಸಿ ಬಿಟ್ಟರು. ಈಗ ಜೇವರಗಿಯು ತಾಲ್ಲೂಕಾಗಿದ್ದು, ಗುಲಬರ್ಗಾ ಜಿಲ್ಲೆಯಲ್ಲಿದೆ.

ಜೇವರಗಿಯ ಭಕ್ತರು ಅಖಂಡೇಶ್ವರ ಮಠ ಕಟ್ಟಿದ ಕಾಲಮಾನ ಶಕೆ ೧೬೩೧ ಎಂದು ಹೇಳುತ್ತಾರೆ. ಇದರ ಪ್ರಕಾರ ಮಠ ಕಟ್ಟಿದ ಕಾಲ ಕ್ರಿ.ಶ. ೧೭೦೯ ಆಗುವುದು. ಇದರಿಂದ ಶ್ರೀ ಷಣ್ಮುಖ ಶಿವಯೋಗಿಗಳ ಕಾಲಾವಧಿ ಕ್ರಿ.ಶ. ೧೭೦೬ ರಿಂದ ೧೭೭೮ ಎನ್ನುವುದು ವಾಸ್ತವಿಕ ವೆನಿಸುವುದು. ಇದಲ್ಲದೆ ಮಠದ ಕಟ್ಟಡದ ನಂತರ ಮುಂದೆ ಎಂಟೇ ವರ್ಷಗಳಲ್ಲಿ ಈ ಮಠವನ್ನು ವಚನ ಮಂಟಪ ವನ್ನಾಗಿ ಮಾರ್ಪಡಿಸಿದ ಮಹಾನುಭಾವನೇ ಷಣ್ಮುಖ ಶಿವ ಯೋಗಿಗಳು. ಇವರು ಜೇವರಗಿಯಲ್ಲಿಯೇ ಜನ್ಮವೆತ್ತಿದವರು. ಇವರ ತಂದೆ ಮಲ್ಲಶೆಟ್ಟಪ್ಪ, ತಾಯಿ ದೊಡ್ಡಮಾಂಬೆ ಎಂದು ತಿಳಿದು ಬಂದಿದೆ.

ಶ್ರೀ ಷಣ್ಮುಖ ಶಿವಯೋಗಿಗಳ ವಚನಗಳಲ್ಲಿ ಅನುಭಾವ–ತತ್ವ–ಸಾಹಿತ್ಯ ಈ ಮೂರೂ ಮುಪ್ಪರಿಗೊಂಡು ಅನುಭಾವ ಮಾರ್ಗಕ್ಕೆ, ಅಂತರಂಗ ನಿರೀಕ್ಷಣೆಗೆ ಪ್ರಥಮ ಸೋಪಾನವಾಗಿದೆ. ಶ್ರೀ ಷಣ್ಮುಖ ಶಿವಯೋಗಿಗಳು ಸ್ವತಃ ತಮ್ಮ ವಚನಗ್ರಂಥಕ್ಕೆ 'ತೂರ್ಯ ನಿರಾಲಂಬ ಶರಣನ ಅರುಹಿನ ಷಟ್‌ಸ್ಥಲ ವಚನ'ವೆಂದು ಹೆಸರಿಸಿರುವರು. 'ತೂರ‍್ಯ ನಿರಾಲಂಬ ಶರಣ' ಎಂಬ ಪದವು ಅನುಭಾವದ ಉನ್ನತ ಸ್ಥಿತಿಯ ನೆಲೆಯನ್ನು ಸೂಚಿಸುತ್ತದೆ. ಇಲ್ಲಿ ಪ್ರಸ್ತಾಪಿತವಾದ 'ಜೀಜದ ಮರೆಯಲ್ಲಿ ಅಡಗಿರ್ದ ಅಂಕುರವು..' ಎನ್ನುವ ವಚನವು ಪಿಂಡಜ್ಞಾನಸ್ಥಲ ಭರಿತವಾಗಿದೆ.

ಬೀಜದ ಮರೆಯಲ್ಲಿ ಅಡಗಿದ ಅಂಕುರವು ಮೊಳಕೆ

* ಸಂಚಾಲಕರು, ಶ್ರೀ ಅಟವೀಶ್ವರ ವಿದ್ಯಾರ್ಥಿ ವಸತಿ ನಿಲಯ, ಚಿಕ್ಕತೊಟ್ಲುಕೆರೆ, ಕೋರಾ ಹೋಬಳಿ, ತುಮಕೂರು ತಾಲ್ಲೂಕು.

'ನಿಮ್ಮ ಶರಣರ ಅನುಭಾವದ ಸಂಗದಿಂದ ನಾನು ಪರಮಸುಖಿಯಾಗಿರುವೆ' –ಅಕ್ಕಮಹಾದೇವಿ

ಯೊಡೆದು, ಬೀಜದಿಂದ ಹೊರಬಂದು ಸಸಿಯಾಗಿ ತೋರುವಂತೆ, ಮುಗಿಲ ಮರೆಯಲ್ಲಿ ಅಡಗಿದ ವಿದ್ಯುತ್(ಮಿಂಚು) ಮೋಡಗಳ ಘರ್ಷಣೆಯಿಂದ ಪ್ರಕಾಶಿಸುವಂತೆ, ಎನ್ನ ಮನದ ಅಂತರಂಗದಲ್ಲಿ ಅಡಗಿದ ಮಹಾಘನವು ಅಂದರೆ ಅನಂತನಾದ ಪರಮಾತ್ಮನು ತನ್ನ ಲೀಲೆಯಿಂದ ತಾನೇ ಕ್ರಿಯಾಜ್ಞಾನಬದ್ಧನಾಗಿ ತೋರುವನು. ನಿತ್ಯನಿಜಜ್ಞಾನದ ಸ್ವಾನುಭಾವದಲ್ಲಿ ಪ್ರಕಾಶಿಸುವನು. ಆತ್ಮಾನುಭಾವದಿಂದ ಆ ಪರಮಾತ್ಮನು ಸ್ಥೂಲದಲ್ಲಿ ಶಕ್ತಿಕ್ರಿಯಾಬದ್ಧನಾಗಿ, ಸೂಕ್ಷ್ಮದಲ್ಲಿ ಆದಿ ಅನಾದಿಗೆ ಅತೀತನಾಗಿ ತಾನೇ ತಾನಾಗಿರುವ ಮಹಾಘನದ ಅಂದರೆ ವಿಶ್ವಾತೀತನಾದ ಪರಮಾತ್ಮನ ನಿಲವನ್ನು ಕಂಡು ಆನಂದಿಸಿದೆನೆಂಬುದನ್ನು ಶ್ರೀ ಷಣ್ಮುಖ ಶಿವಯೋಗಿಗಳು ಈ ವಚನದಲ್ಲಿ ಅನುಭಾವಿಸಿದ್ದಾರೆ, ತೂರ್ಯ ನಿರಾಲಂಬ ಸ್ಥಿತಿಯಲ್ಲಿ ಆನಂದಿಸಿದ್ದಾರೆ.

ಈ ಮಹಾಘನವನ್ನು ಬಸವಣ್ಣನವರು ತಮ್ಮ ನಿತ್ಯ ನಿಜಜ್ಞಾನದ ಸ್ವಾನುಭಾವದಲ್ಲಿ ಹೀಗೆ ಅನುಭವಿಸಿ ಆನಂದಿಸಿದ್ದಾರೆ.

*'ಜಗದಗಲ ಮುಗಿಲಗಲ ಮಿಗೆಯಗಲ ನಿಮ್ಮಗಲ*
*ಪಾತಾಳದಿಂದವೆ ಅತ್ತತ್ತ ನಿಮ್ಮ ಶ್ರೀಚರಣ*
*ಬ್ರಹ್ಮಾಂಡದಿಂದವೆ ಅತ್ತತ್ತ ನಿಮ್ಮ ಶ್ರೀಮುಕುಟ*
*ಅಗಮ್ಯ ಅಗೋಚರ ಅಪ್ರತಿಮ ಲಿಂಗವೆ, ಕೂಡಲ*
*ಸಂಗಮದೇವಯ್ಯ ಎನ್ನ ಕರಸ್ಥಲಕ್ಕೆ ಬಂದು*
*ಚುಳುಕಾದಿರಯ್ಯಾ'*

ವಿಶ್ವಾತೀತನಾದ ಪರಮಾತ್ಮನು ಅಗಮ್ಯ, ಅಗೋಚರ, ಅಪ್ರತಿಮನಾಗಿರುವನು. ತನ್ನ ಲೀಲೆಗಾಗಿ ತಾನೆ ಹೊರಗಿನಂತೆ ಒಳಗೂ ಆವರಿಸುವನು. ಇರುವೆಯಂತಹ ಅತಿ ಸಣ್ಣ ದೇಹದಲ್ಲಿಯೂ, ಆನೆಯಂಥ ದೊಡ್ಡ ದೇಹದಲ್ಲಿಯೂ ಅವುಗಳ ಆಕಾರಕ್ಕೆ ತಕ್ಕಂತೆ ಆವಿರ್ಭೂತನಾಗಿರುವನು. ಲೀಲಾಕ್ರಿಯೆಯಲ್ಲಿ ಆದಿಯಾಗಿ, ಅನಂತತೆಯಲ್ಲಿ ಅನಾದಿಯಾಗಿ ತನ್ನ ನಿಲುವನ್ನು ತಾನೇ ಪ್ರಕಾಶಿಸುವನು.

ಒಂದು ಹೂವು, ಅದಕ್ಕೆ ಆಕಾರವಿದೆ, ಲವಲವಿಸುವ ಬಣ್ಣದಿಂದ ಸುಂದರವಾಗಿ ಕಾಣಿಸುತ್ತದೆ. ಸುಮಧುರ ವಾಸನೆಯನ್ನು ಬೀರುತ್ತದೆ. ಹೂವಿನ ಪಕಳೆ ಪಕಳೆಗಳಲ್ಲಿ ಬಣ್ಣವು ರಂಜಿಸುತ್ತದೆ. ಆ ಬಣ್ಣ ಅದರ ಸ್ಥೂಪ ಭಾಗವನ್ನು ಆಧರಿಸಿದೆ. ಆದರೂ ಆ ಬಣ್ಣವನ್ನು ನಮಗೆ ಮುಟ್ಟಲಿಕ್ಕಾಗದು. ಆ ಹೂವಿನ ಪಕಳೆಗಳನ್ನು ಸ್ಪರ್ಶಿಸಬಹುದೇ ಹೊರತಾಗಿ ಪಕಳೆಗಳಲ್ಲಿ ತುಂಬಿದ ಬಣ್ಣವನ್ನು ಸ್ಪರ್ಶಿಸಲಿಕ್ಕಾಗದು. ಇದುವೇ ಆದಿಯ ಲೀಲೆ. ಸ್ಥೂಲವನ್ನಾವರಿಸಿದ ಬಣ್ಣವನ್ನೇ ಮುಟ್ಟಲಿಕ್ಕಾಗದಾಗ ಇನ್ನುಳಿದ ಸುವಾಸನೆಯನ್ನು ಮುಟ್ಟಲು ಸಾಧ್ಯವೇ? ಅದು ಆ ಹೂವಿನ ಸೂಕ್ಷ್ಮತೆಯನ್ನಾವರಿಸಿದೆ. ಆ ಸುವಾಸನೆಯನ್ನು ಘ್ರಾಣಿಸಿಯೇ ಅನುಭವಿಸಬಹುದು ಹೊರತಾಗಿ ಹಿಡಿಯಲಿಕ್ಕಾಗುವುದಿಲ್ಲ, ನೋಡಲಿಕ್ಕಾಗುವುದಿಲ್ಲ. ಅದು ಕೇವಲ ಅನುಭವಿಸುವಂತಹುದು. ಅದು ಸುಜ್ಞಾನದ ಸುಗಂಧ, ಅನಾದಿಯ ಲೀಲೆ, ಅನಾದಿಯ ಲೀಲೆ ಇಲ್ಲದೆ ಆದಿಯ ಲೀಲೆಗೆ ಆಸ್ಪದವಿಲ್ಲ. ಆದಿಯ ಆಧಾರವಿಲ್ಲದೆ ಅನಾದಿ ಲೀಲಾಮಯವಾಗಲಾರದು. ಇದುವೆ ಆದಿಯನಾದಿಯ ಲೀಲೆ. ಪಿಂಡಾಂಡ ಬ್ರಹ್ಮಾಂಡದ ಲೀಲೆಗಳಿಗೆ ಕಾರಣವಾದ ಮಹಾಘನ.

ಕಾಲದೊಂದಿಗೆ ಕಾಣಬಂದ ವಿಶ್ವವು ಆದಿ, ಈ ವಿಶ್ವದ ಅಭಿವ್ಯಕ್ತಿಗೆ ಕಾರಣವಾದ ಘನವೇ ಆಧಾರ. ಪ್ರಥಮದಲ್ಲಿ ವಿಸ್ಫುರಿಸಿದ 'ಅಹಂ'ಪ್ರಜ್ಞೆಯೇ ಹಮ್ಮು. ಆನಂತರ ಕಾಣಬಂದ ತತ್ತ್ವ ವಿಷಯಕ ಅಭಿಮಾನವೆ ಬಿಮ್ಮು. ಇಂದ್ರಿಯಗಳಿಗೆ ಸಹಜ ವೇದ್ಯವಾಗುವ ಸಗುಣ ಪ್ರಪಂಚವು ಸುರಾಳ. ಹಾಗೆಯೇ ವೇದ್ಯವಾಗದ ಬಹುಸೂಕ್ಷ್ಮ ತತ್ತ್ವ ಸಂಕುಳವು ನಿರಾಳವಾದುದು. ವ್ಯಷ್ಟಿಗತ ಜೀವನ ಚೇತನವು ಶೂನ್ಯ. ಸಮಷ್ಟಿಗತ ಶಿವಚೇತನವು ನಿಶೂನ್ಯ. ಜೀವಪ್ರಪಂಚವು ಸಚರ, ಜಡವಾದ ಭೌತ ಪ್ರಪಂಚವು ಅಚರ, ಅಂದರೆ ಚಲಿಸಲಾರದ್ದು. ಸಚರ–ಅಚರ ಇದಾವುದೊಂದೂ ಇಲ್ಲದ ಪರಮ ಮೂಲ ವಸ್ತುವೇ ಪರತತ್ತ್ವ, ಪರಬ್ರಹ್ಮ, ಮಹಾಘನ, ಪರಮಾತ್ಮ, ಅದು ಕಾಲ, ದೇಶ, ವಸ್ತು, ಅವಸ್ಥೆ ಮತ್ತು ಸಂಬಂಧಗಳಿಗೆ ಅತೀತ, ಮೀರಿದ ಸತ್ಯ. ಅದನ್ನು ನಿಷೇಧ ಶಬ್ದಗಳಿಂದ ಸೂಚಿಸಬಹುದೇ ವಿನಃ, ವಿಧಿವತ್ತಾದ ಶಬ್ದಗಳಿಂದ ವರ್ಣಿಸ

'ಮಠ ನಮಗೆ ಏನು ಕೊಟ್ಟಿದೆ ಎಂದು ಕೇಳುವ ಬದಲು –ನಾವು ಮಠಕ್ಕೆ ಏನು ಕೊಟ್ಟಿದ್ದೇವೆ ಎನ್ನುವುದು ಮಹತ್ವದ್ದಾಗಿದೆ'





ಲಾಗದು ಎಂತಲೇ ಸ್ವಾನುಭಾವಿಗಳು, ನಿತ್ಯರು, ಶರಣರು ಅದನ್ನು ಪರಮಶೂನ್ಯವೆಂದು ಸಂಕೇತಿಸಿರುವುದುಂಟು. ಅಂಥ ಶೂನ್ಯತತ್ತ್ವದ ಅನಿರ್ವಚನೀಯ ಸಂಕಲ್ಪ ಸ್ಫುರಣೆಯಿಂದ ಮೂಡಿನಿಂದುದು ಪರಶಿವ ತತ್ತ್ವ, ಅದುವೇ ನಿರಂಜನ, ಅದುವೇ ಶರಣತತ್ವ ಆ ಶರಣ ತತ್ತ್ವದ ಪ್ರಚಂಡ ಅಭಿವ್ಯಕ್ತಿಯೇ ಮೂವತ್ತಾರು ತತ್ತ್ವಗಳು. ತತ್ತ್ವ ಸಂಘಟಿತವಾದ ವಿಶ್ವ, ಅಸಂಖ್ಯ ದೇಹಗಳು, ಆ ದೇಹಗಳಲ್ಲಿ ಮಿನುಗಿದ ಜೀವಚೇತನ. ಹೀಗೆ ಆ ಪರಮಶೂನ್ಯದಿಂದ ಮೂಡಿಬಂದುದೇ ಜೀವಚೇತನ, ಇದುವೇ ಪಿಂಡಜ್ಞಾನ ಚೇತನ, ಇದುವೇ ಆದಿಯನಾದಿಯ ಲೀಲೆ. ಈ ಲೀಲೆಗೆ ಕಾರಣವಾದ ಅನಂತತೆ, ಮಹಾಬಯಲು, ಪರಮ ಆತ್ಮ, ಘನವಸ್ತುವೇ ತನ್ನ ಲೀಲೆಯಿಂದ ತಾನೇ ಉದಯವಾಗಲು ಆದಿಯನಾದಿಯ ನಿಲವು ತಮಗೆ ಗೋಚರವಾಗಿರುವು ದೆಂದು ಶ್ರೀ ಷಣ್ಮುಖ ಶಿವಯೋಗಿಗಳು ತಮ್ಮ ತೂರ್ಯ ನಿರಾಲಂಬ ಶರಣತ್ವದಿಂದ ಈ ಪ್ರಸ್ತುತ ವಚನದಲ್ಲಿ ಪ್ರಸ್ತಾಪಿಸುದ್ದುಂಟು.

ಒಟ್ಟಿನಲ್ಲಿ ಪರತತ್ತ್ವದ ಪರಮಾತ್ಮನು ಭೇದ ಜ್ಞಾನವಿಲ್ಲದ ಶುದ್ಧಚೇತನ. ಅವನದು ನಿರವಯಸ್ವರೂಪ. ಅವನಲ್ಲಿ ಅವನಿಗೆ ಅನನ್ಯವಾದ ಒಂದು ಶಕ್ತಿಯಿದೆ. ಆ ಶಕ್ತಿಯೂ ಅವನಂತೆ ನಿರವಯ. ಅವನು ಪರಶಿವನಾದರೆ ಆ ಶಕ್ತಿಯು ಪರಾಶಕ್ತಿ, ಆತ ಪತಿಯಾದರೆ ಆ ಶಕ್ತಿಯು ಸತಿ. ಅವರದು ಶಿವಶಕ್ತಿಯ ಸಂಪುಟ. ಅವರಿಬ್ಬರಿಂದ ಮೊಟ್ಟಮೊದಲು ಹೊರಹೊಮ್ಮಿದುದು ಚಿಚ್ಛಕ್ತಿ. ಆ ಚಿಚ್ಛಕ್ತಿಯಲ್ಲಿ ಹೊಳೆವ ಶಿವನ ಕಳೆಯೇ 'ಶರಣ'. ಆಕೆ ತಾಯಿ, ಆಕೆಯೇ ಆದಿ, ಈ ಶರಣನು ಆಕೆಯ ಮಗ. ಈ ಶರಣತತ್ತ್ವವೇ ಸೃಷ್ಟಿಮುಖವಾಗಿ ಹರಿದು ದೇಹದಲ್ಲಿ ಅಭಿವ್ಯಕ್ತವಾದಾಗ ಜೀವಾತ್ಮ ಎನಿಸುತ್ತಾನೆ. ಈ ಜೀವಾತ್ಮನು ಪ್ರಾಕೃತಿಕ ವಲಯವನ್ನು ಮೀರಿ ತಾಯಿಯಾದ ಚಿಚ್ಛಕ್ತಿಯನ್ನು ಆಶ್ರಯಿಸಿ ಅವಳಲ್ಲಿ ಬೆರೆತುಹೋದರೆ ಅಹಂಪ್ರಜ್ಞೆಯಿಂದ ನಿರ್ಮುಖನಾಗುತ್ತಾನೆ. ಅಹಂಪ್ರಜ್ಞೆಯೇ ದೋಷ, ಅದು ಅಳಿದುಹೋದುದರಿಂದ ಅವನು ನಿರ್ದೋಷಿ. ಒಟ್ಟಿನಲ್ಲಿ ಜೀವಾತ್ಮನ ಮೂಲಸ್ವರೂಪ ಪರಶಿವ. ಅದನ್ನು ಅರಿತಾಗ ಜೀವಭಾವದ ಮರೆ. ಜೀವಿಯು ತನ್ನನ್ನು ತನ್ನಿಂದ ಭಿನ್ನವಾಗಿ ಅರಿಯುವ ಮುಂಚೆ ನಿಶ್ಯಬ್ದವಾಗಿದ್ದುದೇ ಘನವಸ್ತು. ಈ ಮಾತು ಶಿವಜ್ಞಾನ ದೃಷ್ಟಿಯಿಂದ ನೋಡಿದಾಗ ಕಂಡುಬಂದುದು. ಯಾವಾಗ ಈ ಘನವಸ್ತುವಿನಿಂದ ಭಿನ್ನವಾಗಿ ಜೀವಿಯು ತನ್ನನ್ನು ತಾನು ಅರಿತಾಗ ಆ ಘನವಸ್ತುವಿನ ಸಾಕ್ಷಾತ್ಕಾರವಾಯಿತು, ಅಂದರೆ ತನ್ನ ನಿಜತ್ವದ ದರ್ಶನವಾಯಿತು. ಆಗ ಜೀವ–ಶಿವ ಭಿನ್ನವಲ್ಲದ ನಿಶ್ಯಬ್ದ ಆವರಿಸಿತು. ಈ ಕ್ರಿಯೆಯೇ ಆದಿಯನಾದಿಯ ನಿಲವು. ಜೀವಿಯನ್ನು ಕಾಣುವ ಶಿವಗೆ, ಶಿವತ್ವವನ್ನು ಅನುಭವಿಸುವ ಜೀವನಿಗೆ ಪರತತ್ತ್ವದ ದೃಷ್ಟಿ ಒಂದೇ, ಅದು ಸ್ವಜ್ಞಪ್ತಿ. ಅದೇ ನಿತ್ಯನಿಜಜ್ಞಾನ, ಅದುವೇ ಘನವಸ್ತು. ನಿತ್ಯ ನಿರಂತರ ನಿರಾಲಂಬ ಶರಣತ್ವ ಅದುವೇ ಆ ಮಹಾಘನದ ಅದ್ಭುತ ಮಹಿಮೆಯೆಂಬುದನ್ನು ಪ್ರಾಣಲಿಂಗದ ಪ್ರಕಾಶಪುಷ್ಪವಾಗಿ ಅರಳಿ ಪರಂಜ್ಯೋತಿಯಾಗಿ ಬೆಳಗಿದ ಶ್ರೀ ಷಣ್ಮುಖ ಶಿವಯೋಗಿಗಳು ಈ ವಚನದ ಮುಖಾಂತರ ಪ್ರಕಾಶಿಸಿದ್ದಾರೆ. ☆

ನುಡಿವಲ್ಲಿ ದೋಷವನಾರಿಸದೆ ಬಾಯಿಚ್ಛೆಗೆ
ಬಂದಂತಾಡಿದಡೆ ಅದು ಹೆಮ್ಮೆಯಲ್ಲದೆ ಸಹಜ
ಜ್ಞಾನವಲ್ಲ. ಅದೇನು ಕಾರಣವೆಂದಡೆ,
ಪಾಷಾಣದ ಮೂರ್ತಿ ಘನವೆಂದಡೆ ಅಗ್ನಿಯಿಂದ
ಭಂಗ. ಅಗ್ನಿ ಘನವೆಂದಡೆ ತೋಯದಿಂದ ಭಂಗ.
ತೋಯ ಘನವೆಂದಡೆ ಬಯಲಿನಿಂದ ಭಂಗ.
ಬಯಲು ಘನವೆಂದಡೆ ಅಂತಃಕರಣದಿಂದ ಭಂಗ.
ಅಂತಪ್ಪಂತಃಕರಣ ಘನವೆಂದಡೆ ಮಾಯೆಯಿಂದ
ಭಂಗ. ಮಾಯೆ ಘನವೆಂದಡೆ ಮಹಾದೇವ
ಕಪಿಲಸಿದ್ಧಮಲ್ಲಿಕಾರ್ಜುನ ಪರಬ್ರಹ್ಮದಿಂದ ಭಂಗ
ಕೇಳಾ, ಮಡಿವಾಳ ತಂದೆ.

–ಸಿದ್ಧರಾಮೇಶ್ವರ

'ಅಪಾರವಾದ ಮಾನವೀಯ ಅನುಕಂಪೆಯಲ್ಲಿ ಬುದ್ಧನನ್ನು, ಕ್ಷಮಾಗುಣದಲ್ಲಿ ಕ್ರಿಸ್ತನನ್ನು, ಪೂರ್ಣಯೋಗಸಿದ್ಧಿಯ, ಅನುಷ್ಠಾನದಲ್ಲಿ ಅರವಿಂದರನ್ನು, ಸಮಷ್ಟಿಯ ಮನಸ್ಸನ್ನು ಮುಟ್ಟಿ ಜನ ಜಾಗೃತಿಗೆ ಕಾರಣವಾಗುವ ಜೀವನನಿಷ್ಠೆಯಲ್ಲಿ ಗಾಂಧೀಜಿಯವರನ್ನು, ಕಾವ್ಯಶಕ್ತಿಯಲ್ಲಿ ರವೀಂದ್ರನಾಥ ಟ್ಯಾಗೋರರನ್ನು, ಬಸವಣ್ಣನವರ ವ್ಯಕ್ತಿತ್ವದ ಸಾಧನೆ ನೆನಪಿಗೆ ತರುತ್ತದೆ' – ಡಾ|| ಎಚ್. ತಿಪ್ಪೇರುದ್ರಸ್ವಾಮಿ

# ಮಹಿಳಾ ಸಬಲೀಕರಣ ಸಬಲೀಕರಣಗೊಳಿಸಿದ ಬಸವಣ್ಣನವರ ನಡೆ–ನುಡಿಗಳು

–ಸ.ರಾ. ಸುಳಕೂಡೆ *

**ಪೀಠಿಕೆ :**

ಸಕಲ ಜೀವಾತ್ಮರಿಗೆ ಲೇಸನ್ನೇ ತಂದ ಬಸವಣ್ಣನವರು ವರ್ಣಭೇದ, ಲಿಂಗಭೇದ, ಸಾಮಾಜಿಕ ಮತ್ತು ಆರ್ಥಿಕ ಮೇಲಾಟ ಎಲ್ಲವನ್ನು ಅಳಿಸಿಕೊಂಡ ಸಮಾಜ ನಿರ್ಮಿಸಿದ ಮಹಾನುಭಾವರಲ್ಲಿ ಪ್ರಥಮರಾಗಿದ್ದಾರೆ. ಅಕ್ಕ ನಾಗಮ್ಮನಿಗೆ ಧಾರ್ಮಿಕ ದೀಕ್ಷೆ ಕೊಡುವಲ್ಲಿ ಕುಟುಂಬದವರು ಧರ್ಮದೊಳಗೆ ಅವಕಾಶವಿಲ್ಲವೆಂದು ಹೇಳಿದಾಗ ಧಾರ್ಮಿಕತೆಯ ವಿರುದ್ಧ ಧ್ವನಿಯೆತ್ತಿದ ಬಸವಣ್ಣನವರು ಅಕ್ಕನೊಂದಿಗೆ ಮನೆ ತೊರೆದದ್ದು ಮಹಿಳಾ ಸಬಲೀಕರಣ ಪ್ರಥಮ ಹೆಜ್ಜೆಗೂ ಕ್ರಾಂತಿಕಾರಕ ಮನೋಭೂಮಿಕೆಯ ಪ್ರತೀಕವೂ ಆಗಿದೆ. ಅಕ್ಕ ನಾಗಮ್ಮನ ಮಾರ್ಗದರ್ಶನದೊಳಗೆ ಧಾರ್ಮಿಕ, ಸಾಮಾಜಿಕ, ರಾಜಕೀಯ ಶಿಕ್ಷಣ ಪಡೆದ ಬಸವಣ್ಣನವರು ಮಹಿಳೆಯರು ಬದುಕಿನ ರೂವಾರಿಗಳೆಂದು ಪರಿಗಣಿಸಿದರಲ್ಲದೆ ಹೆಣ್ಣು ಸಂಸಾರಕ್ಕೆ ಅಡತಡೆಯೊಡ್ಡುವವಳೆಂಬ ಧೂರ್ತ ವಿಚಾರದ ವಿರುದ್ಧ ಸಮರವನ್ನೇ ಸಾರಿದರು. ಧಾರ್ಮಿಕತೆಯ ಸಾಧನೆಗೂ ಮಹಿಳೆ ಪೂರಕವೆಂದು ಮತ್ತು ಕೌಟುಂಬಿಕ ಬದುಕು ಪಾರಮಾರ್ಥಿಕ ಸಾಧನೆಗೆ ಪ್ರಸ್ಥವೆಂದು ಸೂತ್ರೀಕರಿಸಿದ್ದಾರೆ.

*ಇಂದ್ರಿಯ ನಿಗ್ರಹವ ಕಾಡುವುವು ಪಂಚೇಂದ್ರಿಯಗಳು!*
*ಸತಿಪತಿರತಿಸುಖವ ಬಿಟ್ಟರೆ ಸಿರಿಯಾಳ–ಚಂಗಳೆಯವರು*
*ಸತಿಪತಿರತಿಸುಖಭೋಗೋಪಭೋಗ ವಿಳಾಸವ*
*ಬಿಟ್ಟ(ನೆ) ಸಿಂಧು ಬಲ್ಲಾಳನು?*
*ನಿಮ್ಮ ಮುಟ್ಟಿ ಪರಧನ–ಪರಸತಿಯರಿಗೆಳಸಿದರೆ*
*ನಿಮ್ಮ ಚರಣಕ್ಕೆ ದೂರ, ಕೂಡಲಸಂಗಮದೇವಾ!*

ಕೌಟುಂಬಿಕ ಬದುಕು ಪಾರಮಾರ್ಥಿಕ ಬದುಕಿಗೆ ತೊಡಕೆಂಬುದು ನಮ್ಮ ಪರಂಪರೆಯ ಭಾಗವಾಗಿಯೇ ನಿಂತಿದೆ. ಮಹಿಳೆಯರು 'ಮಾಯಾ' ರೂಪಿಗಳೆಂದು, ಅವರಿಂದಲೇ ಬದುಕಿನೊಳಗೆ ರಾದ್ಧಾಂತ ರಾಡಿ ಎಂದು ಧಾರ್ಮಿಕ ನೇತಾರರು ಬಿಂಬಿಸದ್ದರಲ್ಲದೆ ಮಹಿಳೆಯನ್ನು ಹೊಸ್ತಿಲಿನೊಳಗೆ ಇಟ್ಟು ಸ್ವಾತಂತ್ರ್ಯಕ್ಕೆ ಅರ್ಹಳು, ವಿಶ್ವಾಸಾರ್ಹಳು ಅಲ್ಲೆಂಬ ಶಾಸ್ತ್ರವನ್ನೇ ಮಾಡಿದ್ದರು. ಮಹಿಳೆಯರ ಬದುಕಿನೊಳಗೆ ಮನೆಯೇ ಚಟುವಟಿಕೆಯ ಕೇಂದ್ರವಾಗಿ ಹೆಂಗಸರ ಬುದ್ಧಿ ಮೊಳಕಾಲ ಕೆಳಗೆ, ಚಂಚಲೆ, ಮಾಯಾರೂಪಿ, ಸಂಕುಚಿತ ಸ್ವಭಾವದವಳೆಂದು ನಂಬುವಂತೆ ಮಾಡಿದ್ದರು. ಇಹದ ಬದುಕನ್ನು ಗೆಲ್ಲುವುದೆಂದರೆ ಕೌಟುಂಬಿಕ ಬದುಕಿನೊಳಗೆ ಸಿಲುಕಿಕೊಳ್ಳದಿರುವುದು, ಮಹಿಳೆ ಮತ್ತು ಸಂಸಾರದಿಂದ ದೂರವಿರುವುದೆಂದೂ ಪ್ರಮಾಣೀಕರಿಸಿ ಹೇಳಲಾಯಿತು. ಹೆಣ್ಣು ಧಾರ್ಮಿಕ ಕಾರ್ಯದೊಳಗೆ ಚರ್ಚೆಯೊಳಗೆ, ಕುಟುಂಬದ ಮಹತ್ವದ ನಿರ್ಣಯಗಳನ್ನು ತೆಗೆದುಕೊಳ್ಳುವ ಪ್ರಸಂಗದಲ್ಲಿ ಭಾಗವಹಿಸದಂತೆಯೂ ಎಚ್ಚರಿಕೆ ವಹಿಸಲಾಗಿತ್ತು. ಮಹಿಳೆ ಶೂದ್ರಳೆಂದು ನಡೆಸಿಕೊಳ್ಳಲಾಗಿತ್ತು. ಭೋಗ ವಸ್ತುವನ್ನಾಗಿಸಿರಿದ್ದ ನಮ್ಮ ಪೂರ್ವಜರು ಮಹಿಳೆ ನಂಬಿಕೆಯುಳ್ಳವಳು ಅಲ್ಲೆಂದು ದೃಢವಾಗಿ ನಂಬಿ, ನಡೆದುಕೊಂಡಿದ್ದರು. ಇಂಥ ನಿರ್ದಯ ನಿರಾಧಾರದ ಬದುಕಿನೊಳಗೆ ಸಿಲುಕಿದ ಮಹಿಳೆಯ ಮೂಕವೇದನೆ, ಮೂಕತನವನ್ನು ಬಿಡಿಸಿದ ಬಸವಣ್ಣನವರು ಬದುಕಿನ ಎಲ್ಲ ಹಂತಗಳಲ್ಲಿ ಪುರುಷನ ಸಮಾನವಾಗಿ ಕ್ರಿಯಾಶೀಲತೆಯಿಂದ ಭಾಗವಹಿಸುವಂತೆ ನೋಡಿಕೊಂಡರು. ಹೆಣ್ಣು ಮಾಯೆಯಲ್ಲೆಂಬ ಸತ್ಯವನ್ನು ಪ್ರತಿಪಾದಿಸಿದ ಬಸವಣ್ಣನವರು ಹೆಣ್ಣನ್ನು ಎಲ್ಲ ಬಂಧನಗಳಿಂದ ಮುಕ್ತಗೊಳಿಸಿದ್ದು ಜಗತ್ತಿನ ಮಹಿಳಾ ಇತಿಹಾಸದೊಳಗೆ ದಾಖಲಾರ್ಹ ಸಂಗತಿಯಾಗಿದೆ.

* 1319, 'ಶಿವಪ್ರಸಾದ', ಶ್ರೀ ಬಸವೇಶ್ವರ ಬಡಾವಣೆ, ರಾಮತೀರ್ಥನಗರ, ಬೆಳಗಾವಿ– 590 015.

'ವೀರಶೈವ ಅನುಭಾವಿಗಳ ಕಲ್ಪನೆಯು ಶೂನ್ಯ ಅಥವಾ ಬಯಲು. ಬೌದ್ಧರ ಶೂನ್ಯವಾದದಿಂದಲೂ ಅದ್ವೈತದ ನಿರ್ಗುಣತ್ವದಿಂದಲೂ ಭಿನ್ನವಾದುದು' – ಡಾ|| ಎನ್.ಎ. ನಿಕ್ಕಾಮ್





**ಮಹಿಳೆಯರನು ನೋಡುವ ದೃಷ್ಟಿ ಬದಲಾಯಿಸಿದ ಬಸವಣ್ಣ:**

ಗಂಡು–ಹೆಣ್ಣು ಭೇದ ಅಳಿಸಿದ ಬಸವಣ್ಣ ಜೀವನ ಮೌಲ್ಯಕ್ಕೆ ಪ್ರಾಶಸ್ತ್ಯ ನೀಡಿದ್ದರು.

*ಕಾಮವೇಕೋ ಲಿಂಗಪ್ರೇಮಿಯೆನಿಸುವಂಗೆ ?*
*ಕ್ರೋಧವೇಕೋ ಶರಣವೇದ್ಯನೆನಿಸುವಂಗೆ ?*
*ಲೋಭವೇಕೋ ಪ್ರಸಾದವೇದ್ಯನೆನಿಸುವಂಗೆ?*
*ಮೋಹವೇಕೋ ಪ್ರಸಾದವೇದ್ಯನೆನಿಸುವಂಗೆ ?*
*ಮದಮತ್ಸರವುಳ್ಳವಂಗೆ ಹೃದಯಶುದ್ಧವೆಲ್ಲಿಯದೋ?*
*ಹದುಳಿಗರಾದಲ್ಲಿಪ್ಪ ನಮ್ಮ ಕೂಡಲಸಂಗಮದೇವ*

ಮಾನವೀಯ ಸಂಬಂಧಗಳಲ್ಲಿ ಶೀಲ ಆಚಾರಕ್ಕೆ ಪ್ರಾಮುಖ್ಯತೆ ನೀಡಿದ್ದ ಬಸವಣ್ಣನವರು 'ನಾಗರಿಕತೆ' ಬೆಳೆಸಿಕೊಳ್ಳುವ ಅಗತ್ಯತೆ, ಗಂಡು–ಹೆಣ್ಣಿಗೆ ಇಬ್ಬರಿಗೂ ಅಗತ್ಯವೆಂದು ಹೇಳಿದ್ದಾರೆ. ಗಂಡು–ಹೆಣ್ಣು ಈ ಜಗವನ್ನು ಬೆಳಗಿಸುವ ದಿವ್ಯತೆಗಳೆಂದು ಮನದಟ್ಟು ಮಾಡಿಕೊಂಡಿದ್ದ ಬಸವಣ್ಣನವರು ಮಾನವೀಯತೆ ಬೆಳೆಸಿಕೊಂಡಲ್ಲಿ ಬದುಕಿನ ಮರ್ಮವು ಸಮರಸವಾಗಿ ರೂಪುಗೊಳ್ಳುವುದೆಂದರಲ್ಲದೆ ಪ್ರಾಯೋಗಿಕವಾಗಿ ಅರಿತುಕೊಂಡು ಸಕಲರೂ ಒಳ್ಳೆಯವರೇ ಎಂದು ಅನುಭಾವ ಪಸರಿಸಿದರು. ಮಾನವೀಯ ಅಂತಃಕರಣವನ್ನೇ ಮೈವೆತ್ತಿಕೊಂಡಿದ್ದ ಬಸವಣ್ಣನವರು ದಯವೇ ಧರ್ಮವೆಂದು ಸಾರಿದರು. ಮಹಿಳೆಯರನ್ನು ನೋಡುವ ದೃಷ್ಟಿ ಮತ್ತು ಪುರುಷರೇ ಶ್ರೇಷ್ಠ ಎಂಬ ಪಾರಮ್ಯದ ಗ್ರಹಿಕೆಯನ್ನು ಪರಾಮರ್ಶಿಸುವ ಸುಬುದ್ಧಿಯನ್ನು ಜನಮಾನಸಕ್ಕೆ ಬಿಂಬಿಸಿದ ಬಸವಣ್ಣನವರು ಸಂಸಾರವನ್ನು ಸಶಕ್ತಗೊಳಿಸುವಲ್ಲಿ ಮಹಿಳೆಯರಿಗೂ ಸಮಪಾಲು ಇರುವುದನ್ನು ದೃಢಪಡಿಸಿದರು. ಮಹಿಳೆ ಎಂದರೆ ಕೀಳು, ತುಚ್ಛವೆಂಬ ಮನೋಗತದೊಳಗೆ ಬದಲಾವಣೆ ತಂದ ಬಸವಣ್ಣನವರು ಬದುಕಿಗೆ ಮದ–ಮತ್ಸರಗಳೇ ಮಾರಕವೆಂದು ಹೇಳಿದರು.

**ಮನದೊಳಗೆ ಸ್ತ್ರೀ ವ್ಯಾಮೋಹ ನುಸುಳದಂತೆ ಎಚ್ಚರಿಕೆ ವಹಿಸಿದ ಬಸವಣ್ಣನವರು ಮಹಿಳೆಗೆ ಉಚ್ಛ ಸ್ಥಾನ ನೀಡಿದರು:**

ಪುರುಷರು ಮಹಿಳೆಯರನ್ನು ಒಂದು ಸೊತ್ತಾಗಿ, ವಸ್ತುವಾಗಿ ಪರಿಗಣಿಸಿದ್ದು ಸರ್ವಶೃತವೇ ಆಗಿದೆ. ಹೆಣ್ಣಿನ ವ್ಯಾಮೋಹ ಅನೇಕ ಕೆಡಕುಗಳಿಗೆ ಕಾರಣವಾಗಿದೆ. ಮನಸ್ಸಿನ ಕೈಯೊಳಗೆ ಸಿಲುಕಿದ ಮನುಷ್ಯನು ಮನುಷ್ಯ ವ್ಯವಹಾರದಿಂದ ದೂರನಾಗಿ ಅವ್ಯವಹಾರದೊಳಗೆ, ಅನಾಚಾರದೊಳಗೆ ನಿರತನಾಗುವುದನ್ನು ಗಮನಿಸಿದ ಬಸವಣ್ಣನವರು ಮನದ ಮಲಿನತೆಯನ್ನು ಕರಗಿಸುವ ಪರಿಯನ್ನೇ ನಮಗೆಲ್ಲಾ ತೋರಿಸಿದ್ದಾರೆ.

*ಎಲ್ಲಿ ನೋಡಿದಲ್ಲಿ ಮನವೆಳಸಿದರೆ*
*ಆಣೆ, ನಿಮ್ಮಾಣೆ ನಿಮ್ಮ ಪ್ರಮಥರಾಣೆ !*
*ಪರವಧುವನು ಮಹಾದೇವಿಯೆಂಬೆ,*
*ಕೂಡಲಸಂಗಮದೇವಾ.*

ಮಹಿಳೆಯನ್ನು ಪಾವಿತ್ರ್ಯತೆಯಿಂದ ನಡೆಸಿಕೊಳ್ಳುವ ಮನವನ್ನು ಹೊಂದುವುದು ಅಗತ್ಯವೆಂದು ಮನಗಂಡ ಬಸವಣ್ಣನವರು 'ಪರವಧುವನ್ನು ಮಹಾದೇವಿ' ಎಂದು ನಡೆದುಕೊಳ್ಳುವ ಸೂಚನೆಯನ್ನು ಕೊಟ್ಟಿದ್ದಾರೆ. 'ಮಹಿಳೆ'ಯ ರೂಪ ಲಾವಣ್ಯಕ್ಕೆ ಮರುಳಾಗಿ ಮನ ಬಂದಂತೆ ವರ್ತಿಸುವುದು ಮಾನವೀಯ ಬದುಕಾಗಲಾರದು. ಪಶು ಜನ್ಯ ಆಸೆ ಆಮಿಷಗಳನ್ನು ಗೆದ್ದುಕೊಂಡು ಸ್ತ್ರೀ ವ್ಯಾಮೋಹಕ್ಕೆ ತಡೆ ಹಾಕಿಕೊಳ್ಳುವುದೇ ಮಹಿಳಾ ಸಬಲೀಕರಣಕ್ಕೆ ಸೂಕ್ತ ಮಾರ್ಗವಾಗಿದೆ.

**ಮಹಿಳಾ ಸಬಲೀಕರಣಕ್ಕೆ ಸದಾಚಾರಣೆಯೇ ಮೂಲಾಧಾರ:**

ಮಹಿಳೆಯರು ಪುರುಷರಿಗಿಂತಲೂ ಸಹನಶೀಲತೆ, ಸೇವೆ ತ್ಯಾಗಗಳಲ್ಲಿ ಮುಂದಿದ್ದಾರೆ. ಅವರಿಗೆ ಸೂಕ್ತ ಅವಕಾಶಗಳನ್ನು ಕೊಟ್ಟರೆ ಮಾನವೀಯ ಮೌಲ್ಯಗಳನ್ನು ಆಚರಣೆ ತರುವಲ್ಲಿ ರಹದಾರಿಯೇ ನಿರ್ಮಾಣವಾಗುತ್ತದೆ. ಮಹಿಳೆಯರು ಸದೃಢರು, ದೃಢವುಳ್ಳ ಮನಸ್ಸಿನವರು ಎಂಬ ಮನೋಗತವು ಸರ್ವತ್ರ ರೂಢಿಗತಗೊಳ್ಳಬೇಕಾಗಿದೆ. ಮಹಿಳೆಯರನ್ನು ಶೋಷಿಸುವ, ಅವರ ಮೇಲೆ ಒತ್ತಾಯಪೂರ್ವಕ ಮಾಲಿಕತ್ವ ಸಾಧಿಸುವ ಮನೋಗತಗಳು ನಿರಸನಗೊಳ್ಳುವ ಅಗತ್ಯವಿರುವುದನ್ನು ಬಸವಣ್ಣನವರು ನಡೆ–ನುಡಿಯೊಳಗೆ ಬಿಂಬಿಸಿಕೊಂಡಿದ್ದನ್ನು ಅರಿತುಕೊಳ್ಳುವ ಅಗತ್ಯವಿದೆ. ಅವರು ಮಾನವೀಯ ಮೌಲ್ಯಗಳಿಗೆ ಕೊಟ್ಟ ಪ್ರಾಶಸ್ತ್ಯ ಎಲ್ಲ ಕಾಲಕ್ಕೂ

'ದಾಸೋಹವು ದೈಹಿಕ ಶ್ರಮ ಹಾಗೂ ನೈತಿಕಮಾರ್ಗ ಇವೆರಡನ್ನೂ ಅಪೇಕ್ಷಿಸುತ್ತದೆ' –ಡಾ|| ಸಾ.ಶಿ. ಮರುಳಯ್ಯ

ಸರ್ವಮಾನ್ಯವೇ ಆಗಿದೆ. ಅದಕ್ಕಾಗಿ ಅವರು ಜಗತ್ತಿನ ಅನಿಷ್ಟಗಳನ್ನು ದೂರವಿಡುವ ಆಲೋಚನೆಗಳಿಗೆ ತೆರೆದುಕೊಂಡು ನುಡಿದದ್ದು ಅನುಕರಣೀಯವಾಗಿದೆ.

*ಹರಿವ ಹಾವಿಗಂಜೆ, ಉರಿಯ ನಾಲಿಗೆಗಂಜೆ,*
*ಸುರಗಿಯ ಮೊನೆಗಂಜೆ!*
*ಒಂದಕ್ಕಂಜುವೆ, ಒಂದಕ್ಕಳುಕುವೆ ;*
*ಪರಸ್ತ್ರೀ ಪರಧನವೆಂಬೀ ಜೂಬಿಂಗಂಜುವೆ !*
*ಅಂಜುವೆನಯ್ಯಾ, ಕೂಡಲಸಂಗಮದೇವಾ.*

'ಸಂಯಮ' ಬದುಕಿನಲ್ಲಿ ಅನುಸರಿಸಲೇ ಬೇಕಾದ ಮೌಲ್ಯವಾಗಿದೆ. ನಮ್ಮ ಸಾಧನೆಗಳು ಉಚ್ಚಮಟ್ಟದಾಗಿದ್ದು ಪರಸ್ತ್ರೀ ಪರಧನದೊಳಗೆ ನುಗ್ಗಲು ಮುಂದಾದರೆ ಎಲ್ಲವೂ ವ್ಯರ್ಥವಾಗಿ ನಿಲ್ಲುತ್ತದೆ. ಮಹಿಳಾ ಸಬಲೀಕರಣಕ್ಕೆ ಸಂಯಮ ಬದುಕು ಮುಖ್ಯವೆಂಬುದೇ ಬಸವಣ್ಣನವರ ಅನುಭಾವ ಸಾರವಾಗಿದೆ.

*ನೋಡಲಾಗದು ನುಡಿಸಲಾಗದು ಪರಸ್ತ್ರೀಯ ಬೇಡ,*
*ಕಾಣಿರೋ! ತಗರ ಬೆನ್ನಲಿ ಹರಿವ ಸೊಣಗನಂತೆ*
*ಬೇಡ ಕಾಣಿರೋ! ಒಂದಾಸೆಗೆ ಸಾವಿರ ವರುಷ*
*ನರಕಗೊಳದ್ದುವ ಕೂಡಲಸಂಗಮದೇವಾ!*

ಸಂಯಮದ ಬದುಕಿನೊಳಗೆ ಮಹಿಳಾ ಸಬಲೀಕರಣದ ಸೂತ್ರವಿದೆ. ಹೆಣ್ಣು ಕೆಡುಕುಗಳಿಗೆ ಕಾರಣವೆಂದು ಪರಿಭಾಷಿಸುವ ಪುರುಷರು ಸಂಯಮಗೊಂಡರೆ ಮಾತ್ರ ಮಹಿಳಾ ಸಬಲೀಕರಣವು ಪ್ರಗತಿಗೆ ಭಾಜನವಾಗುತ್ತದೆ.

**ಹೆಣ್ಣು ಮಾರಿ ಎಂಬುದರ ಹಿಂದೆ ಪುರೋಹಿತಶಾಹಿಯ ಕುತಂತ್ರ, ಮಹಿಳಾ ಸ್ವಾತಂತ್ರ್ಯಕ್ಕೆ ಕಂಟಕ :**

ಮಾನವೀಯ ಸಂಬಂಧಗಳಲ್ಲಿ ಹಲವಾರು ತಾರತಮ್ಯಗಳನ್ನು ಬಿತ್ತುವಲ್ಲಿ ಪುರೋಹಿತಶಾಹಿಯು ಪ್ರಮುಖ ಪಾತ್ರ ವಹಿಸುತ್ತಿದ್ದನ್ನು ಗಮನಿಸಿದ ಬಸವಣ್ಣನವರು ಪುರೋಹಿತಶಾಹಿಯನ್ನು ಅಳಿಸಲು ಮುಂದಾದರು. ಹೆಣ್ಣಿಗೆ ಒಂದು ಕಾನೂನು, ಗಂಡಿಗೊಂದು ಕಾನೂನು ಎಂಬ ಧೂರ್ತತನವನ್ನು ಬದಿಗೆ ಸರಿಸಿ ಸರ್ವರು 'ಅರಿವೇ ಗುರು'ವೆಂದು ಬದುಕುವ ಮಹೋನ್ನತಿ ತತ್ತ್ವವನ್ನು ಜಾರಿಗೆ ತಂದರು. ಹೆಣ್ಣಿಗೆ ಪರಂಪರಾಗತವಾಗಿ ಅಂಟಿಕೊಂಡಿದ್ದ ಮಾರಿ ಮಸಣಿಯ ಶಾಪವನ್ನು ಅಳಿಸಿ ಕಂಗಳು ತಪ್ಪಿ ನೋಡುವುದು, ನಾಲಿಗೆ ತಪ್ಪಿ ನುಡಿಯುವುದೇ ಬದುಕಿಗೆ ಮಾರಿ ಎಂದು ವಿವೇಚಿಸಿದ ಬಸವಣ್ಣನವರ ಅನುಭಾವ ಗಮನಾರ್ಹ.

*ಮಾರಿ ಮಸಣಿಯೆಂಬುವು ಬೇರಿಲ್ಲ ಕಾಣಿರೋ!*
*ಮಾರಿಯೆಂಬುದೇನು? ಕಂಗಳು ತಪ್ಪಿ ನೋಡಿದರೆ*
*ಮಾರಿ; ನಾಲಿಗೆ ತಪ್ಪಿ ನುಡುವರೆ ಮಾರಿ*
*ನಮ್ಮ ಕೂಡಲಸಂಗಮದೇವರ ನೆನಹ ಮರೆದರೆ ಮಾರಿ!*

ಹೆಣ್ಣು ಮಾರಿ ಎಂಬುದು ಜನಜನಿತ ಮಾತಾಗಿದೆ. ಇಂಥ ಹೆಣ್ಣಿನ ಜನನದ ವಿರೋಧಿತನವನ್ನು ಸೂಕ್ಷ್ಮವಾಗಿ ಗಮನಿಸಿದ ಬಸವಣ್ಣನವರು ಬದುಕಿನೊಳಗೆ ಅವಘಡಗಳು ನಮ್ಮ ನುಡಿ-ನೋಟಗಳಿಂದ ಘಟಿಸುತ್ತವೆಂಬ 'ವೈಜ್ಞಾನಿಕ ವಿಚಾರವನ್ನು ಅತ್ಯಂತ ಮಾರ್ಮಿಕವಾಗಿ ಪ್ರಸ್ತುತಗೊಳಿಸಿದ್ದಾರೆ.

ಬಸವಣ್ಣನವರು ಸಕಲರು ಅನುಸರಿಸುವ ಜೀವ ಪ್ರೀತಿಯ ತತ್ವಗಳನ್ನು ನಡೆದು ತೋರಿಸಿದ್ದಾರೆ. ಉದ್ಧಾರದ ಮಾತುಗಳಾಚೆ ನಿಂತು ಜೀವನ ದರ್ಶನ ಮಾಡಿರುವ ಬಸವಣ್ಣನವರು ಹೆಣ್ಣಿಗೆ ಪುರುಷರು ಮಾನ್ಯತೆ ಕೊಡುವಂತಹ ಪರಿಸರವನ್ನು ನಿರ್ಮಿಸಿದರು. ಸಂಸಾರದೊಳಗೆ ಬದುಕಿನ ಸಾರ್ಥಕತೆ ಸಗ್ಗದ ಸಿರಿಯನ್ನು ಕಾಣುವಂತೆ ನಡೆ-ನುಡಿಗಳನ್ನು ಪಾಲಿಸಿದ ಬಸವಣ್ಣನವರು ಅಂತರಂಗ-ಬಹಿರಂಗ ಶುದ್ಧಿಗೆ ಸಕಲರೂ ಸ್ಪಂದಿಸುವಂತೆ ಮಾಡಿ ಮಾರಿ-ಮಸಣಿಯನ್ನು ಇಲ್ಲದಂತಾಗಿಸಿದರು.

**ವೈಚಾರಿಕತೆಯೊಳಗೆ ಬದುಕುವುದೇ ಮಹಿಳಾ ಸಬಲೀಕರಣ:**

ಮಹಿಳೆಯರೊಳಗೆ ಅನೇಕ ಮೂಢಾಚಾರಗಳು, ಕಂದಾಚಾರಗಳು ತುಂಬಿವೆ. ಬದುಕುವ ರೀತಿ-ನೀತಿಗಳಿಗಿಂತಲೂ ಆ ದೇವರು, ಈ ದೇವರು, ಆಲದ ಮರವ ಸುತ್ತುವುದು, ಪುಣ್ಯಕ್ಷೇತ್ರಗಳಿಗೆ ಹೋಗುವುದು, ಪೂಜೆಯನ್ನು ಮಾಡಿಸುವಲ್ಲಿ ಮಹಿಳೆಯರಿಗೆ ಎಲ್ಲಿಲ್ಲದ ಪ್ರೀತಿ. ಇದೆಲ್ಲವೂ ಬದುಕಿಗೆ ಸ್ವಾವಲಂಬನೆ, ಸಮಭಾವ ತರಲಾರದೆಂದು

'ವೀರಶೈವನಾದವನಿಗೆ ನಿತ್ಯಕರ್ಮಗಳಾದ ಶಿವಪೂಜಾದಿಕರ್ಮಗಳನ್ನು ಬಿಡಲಿಕ್ಕೆ ಬರುವುದಿಲ್ಲ, ಬಿಟ್ಟರೆ ಪತಿತನಾಗುವನು' -ವ್ಯಾಕರಣತೀರ್ಥ ಶ್ರೀ ಚಂದ್ರಶೇಖರಶಾಸ್ತ್ರಿಗಳು





ಬಸವಣ್ಣನವರು ಮೂಢಾಚಾರದ ವಿರುದ್ಧ ಯುದ್ಧವನ್ನೇ ಸಾರಿದರು. ಅವರ ಬದುಕಿನ ಎಲ್ಲ ಹಂತಗಳಲ್ಲಿ ಮಾನವೀಯತೆಗೆ ಸಹಕಾರಿಯಾಗಿ ಬಾಳುವ ವೈಚಾರಿಕತೆಯು ತುಂಬಿ ತುಳುಕಿದೆ. ವೈಜ್ಞಾನಿಕತೆಯ ಎಲ್ಲ ಆಯಾಮಗಳನ್ನು ಕರಗತ ಮಾಡಿಕೊಂಡಿದ್ದ ಬಸವಣ್ಣನವರು ವ್ಯಕ್ತಿಯು ಬಲಾಢ್ಯನಾದರೆ ಮಾತ್ರ ನಿಶ್ಚಿತ ಗುರಿಯನ್ನು ಸಾಧಿಸಲು ಸಾಧ್ಯವೆಂದು ನಂಬಿದ್ದರು. ಅದಕ್ಕಾಗಿ ಬದುಕಿನೊಳಗೆ ಅನಾವಶ್ಯಕ ಕುತರ್ಕಗಳು ಬರದಂತೆ ನಿಗಾ ವಹಿಸಿದ್ದು ವಿಶೇಷ.

*ತೊರೆಯ ಮೀವಣ್ಣಗಳಿರಾ, ತೊರೆಯ ಮೀವ*
*ಸ್ವಾಮಿಗಳಿರಾ, ತೊರೆಯಿಂ ಭೋ ತೊರೆಯಿಂ ಭೋ!*
*ಪರಧನದಾಮಿಷವ ತೊರೆಯಿಂ ಭೋ!*
*ಇವ ತೊರೆಯದೆ ಹೋಗಿ ತೊರೆಯ ಮಿಂದರೆ*
*ಬರುದೊರೆ ಹೋಹುದು, ಕೂಡಲಸಂಗಮದೇವಾ*

ಮಣ್ಣಿನೊಳಗಾಗಿ, ಹೊನ್ನಿನೊಳಗಾಗಿ, ಹೆಣ್ಣಿನೊಳಗಾಗಿ ಕೆಟ್ಟುಹೋದೆವೆಂದು ಅಲ್ಲದೆಡೆ ತಿರುಗಾಡಿ, ಪುಣ್ಯಸ್ನಾನಕ್ಕೆ ಹಂಬಲಿಸುವುದೆಲ್ಲವೂ ವ್ಯರ್ಥ ಶ್ರಮವೆಂದು ನಡೆದು ತೋರಿಸಿದ ಬಸವಣ್ಣನವರು, ಪರಧನ, ಪರನಾರಿಯ ಸಂಗದಿಂದ ದೂರವಿರುವುದೇ ಸಬಲೀಕರಣದ ಮೆಟ್ಟಿಲೆಂಬುದನ್ನು ಸಾಧನೆ ಪ್ರಸಾರ ಕೈಕೊಂಡಿದ್ದಾರೆ. ಮಹಿಳಾ ಸಬಲೀಕರಣವು ಮನ ತೆರೆದು ಮಾತಾಡುವಲ್ಲಿ ಕೇಂದ್ರೀಕರಿಸಿದ ಬಸವಣ್ಣನವರು ನಡೆದಂತೆ ನುಡಿದು, ನುಡಿದಂತೆ ನಡೆದು ವೈಜ್ಞಾನಿಕ ನಿಲುವಿಗೆ ಸಕಲರನ್ನು ಸಜ್ಜುಗೊಳಿಸಿದರು. ಅನುಭವ ಮಂಟಪದೊಳಗೆ ಸ್ತ್ರೀ-ಪುರುಷರೆಲ್ಲರೂ ಇಹದ ಬದುಕಿನ ಸಹ್ಯತೆಯನ್ನು ಪ್ರಾಯೋಗಿಕ ನೆಲೆಯೊಳಗೆ ಚರ್ಚಿಸಿ, ಅಂತರಂಗದ ಅರಿವಿಗೆ ಕಿರಿದು-ಹಿರಿದೆಲ್ಲೆಂದು ಸಾರಿದ್ದು ವೈಚಾರಿಕೆಗೊಂದು ಮಾದರಿಯಾಗಿದೆ.

**ಕಾಯಕ, ದಾಸೋಹ, ಸತ್ಸಂಗ ಮಹಿಳಾ ಸಬಲೀಕರಣಕ್ಕೆ ಉತ್ತಮ ಮಾರ್ಗಗಳು :**

ಬಸವಣ್ಣನವರು ಬಾಲ್ಯದಿಂದಲೇ ಸರಿ-ಸಮತೆಯ ಪ್ರಬಲ ಪ್ರತಿಪಾದಕರಾಗಿದ್ದರು. ಅವರು ಗುಡಿ-ಗುಂಡಾರ ಸುತ್ತುವ, ಪುರೋಹಿತಾ ಪಂಚಾಂಗದಂತೆ ಅಲ್ಲಸಲ್ಲದ ಶಾಂತಿ ಪೂಜೆ ಮಾಡುವುದನ್ನು ನಿರಸನಗೊಳಿಸಿದ್ದಲ್ಲಿ ಇಹದ ಬೆಳಕು ಸ್ಪಷ್ಟಗೊಳ್ಳುತ್ತದೆಂದು ಅರಿತುಕೊಳ್ಳುವ ಅನಿವಾರ್ಯತೆಯನ್ನು ಬಿಂಬಿಸುವಲ್ಲಿಯೂ ಯಶಸ್ವಿಯಾಗಿದ್ದರು. ಅಂತಸ್ತು-ಅಧಿಕಾರ, ಸ್ಥಾನ-ಮಾನ, ಗಂಡು-ಹೆಣ್ಣು ಎಂಬ ಯಾವುದೇ ಭೇದಭಾವವಿಲ್ಲದೆ ಎಲ್ಲರೂ ಒಂದಿಲ್ಲೊಂದು ಸತ್ಯ-ಶುದ್ಧ ಕಾಯಕದೊಳಗೆ ತೊಡುವುದರ ಜೊತೆಗೆ ಗಳಿಕೆಯೊಳಗಿನ ಅಲ್ಪಭಾಗವನ್ನು ದಾಸೋಹಕ್ಕೂ ಬಳಸಬೇಕೆಂಬ ಮನೋಭಾವ ಸದಾಜಾಗ್ರತವಾಗಿರಬೇಕೆಂಬ ಸದಾಚರಣೆ ಸಾಂಗಗೊಳಿಸಿದ್ದ ಬಸವಣ್ಣನವರು ಮಹಿಳಾ ಸಬಲೀಕರಣಕ್ಕೆ ತಕ್ಕ ಏರ್ಪಾಡು ಮಾಡಿದ್ದು ಇಂದಿನ ಸಂವಿಧಾನಕ್ಕೂ ಮಾರ್ಗಸೂಚಿಯಾಗಿ ನಿಂತಿದೆ. ಬಸವಣ್ಣನವರು ರೂಢಿಗೆ ತಂದಿರುವ 'ಕಾಯಕ ಸಿದ್ಧಾಂತ'ವು ಎಲ್ಲ ಕಾಯಕಗಳು ಉತ್ಕೃಷ್ಟವಾಗಿದ್ದನ್ನು ಎತ್ತಿ ಹಿಡಿದಿವೆ. ಯಾವುದೇ ಕಾರ್ಯದಲ್ಲಿ ತೊಡಗಿದ್ದರೂ ಅರ್ಪಣಾ ಭಾವದಿಂದ ಕಾರ್ಯನಿರ್ವಹಣೆಗೆ ಆದ್ಯತೆ ಕೊಡಬೇಕೆಂಬ ಬಸವಣ್ಣನವರು ಕಾಯಕದ ಪ್ರತಿಫಲವು ಮೋಸ-ವಂಚನೆಯಿಂದ ಕೂಡಿರಬಾರದೆಂದು ಎಚ್ಚರಿಸಿದ್ದು ಮನನ ಯೋಗ್ಯವಾಗಿದೆ. ಮಹಿಳೆಯರು ತಮ್ಮ ತಮ್ಮ ಸಂಸಾರಗಳನ್ನು ನಿಭಾಯಿಸಿಕೊಂಡು ದಾಸೋಹದೊಳಗೆ ನಿಷ್ಠೆ ಬೆಳೆಸಿಕೊಂಡಿದ್ದು ಇಂದು ಇತಿಹಾಸವಾಗಿ ನಿಂತಿದೆ. ಮಹಿಳೆಯರು ತಮ್ಮ ತಮ್ಮ ಕಾಯಕದೊಳಗೆ ಕಂಡುಕೊಂಡ ಸಮಾನತೆಯ ಬೆಳಕನ್ನು ಭಿನ್ನವಿಸಿದ್ದು ಶ್ರಮ ಸಂಸ್ಕೃತಿಗೆ ಏಕೈಕ ಉದಾಹರಣೆಯಾಗಿ ನಿಂತಿದೆ. ಮಹಿಳೆಯರು ಕಾಯಕ, ದಾಸೋಹ, ಸತ್ಸಂಗ ಮತ್ತು ಅನುಭಾವ ಗೋಷ್ಠಿಯೊಳಗೆ ಸಕ್ರಿಯವಾಗಿ ಭಾಗ ವಹಿಸುವ ಮೂಲಕ ಮಹಿಳಾ ಸಬಲೀಕರಣಕ್ಕೆ ಹೊಸ ಅಧ್ಯಾಯ ತೆರೆದದ್ದು ಹೆಮ್ಮೆಯ ಸಂಗತಿಯಾಗಿದೆ. ಕಾಯಕ ನಿಷ್ಠೆ ಮತ್ತು ಸತ್ಸಂಗದೊಳಗೆ ವ್ಯಕ್ತಗೊಂಡ ವಿಚಾರ ಹೆಣ್ಣು ಬದುಕಿನ ರೂವಾರಿ ಎಂಬುದನ್ನು ಸಾಬೀತುಪಡಿಸಿವೆ. ಶರಣರೆಲ್ಲರೂ ಮಹಿಳಾ ಸಬಲೀಕರಣವನ್ನು ಪ್ರೋತ್ಸಾಹಿಸಿದ್ದಾರಲ್ಲದೆ ಮಹಿಳೆಯರ ಬದುಕಿಗೆ ಅರ್ಥ ತುಂಬಿದ್ದು ಮನನೀಯವಾಗಿದೆ.

-ಮುಂದುವರಿಯುತ್ತದೆ.

'ಶರಣರದೊಂದು ಪಂಥವಲ್ಲ, ಪಥ ; ಮಾರ್ಗ' -ಡಾ॥ ಸಿದ್ಧಯ್ಯ ಪುರಾಣಿಕ

# ಹಿಂದಣ ಹೆಜ್ಜೆಯ ನೋಡಿ ಮುಂದಡಿಯಿಡು

-ಡಾ|| ಆರ್.ಬಿ. ಚಿಲುಮಿ *

**೧೨ನೇ** ಶತಮಾನದ ಶಿವಶರಣರನ್ನು ನೆನಪಿಸುವ ಕಾಲವಿಂದು ಸನ್ನಿಹಿತವಾಗಿದೆ. ಏಕೆಂದರೆ ಮಾನವ ಮಾನವನಾಗಿ ವರ್ತಿಸಲಾರನು. ಅನ್ಯಾಯ, ಅಧರ್ಮ, ಅನೀತಿ, ಭ್ರಷ್ಟಾಚಾರಗಳಲ್ಲಿ ತೊಡಗಿರುವುದೇ ಹೆಚ್ಚಾಗುತ್ತಿದೆ! ಪಾಪಾತ್ಮರು ತುಂಬಿದ ಸಮಾಜ ನಿರ್ಮಾಣವಾಗುತ್ತಿದೆ. ಮಾನವ-ಮಾನವರಲ್ಲಿ ಸೇರಿಕೆಯಿಲ್ಲದಂತಾಗಿದೆ. ಬಂಧು-ಬಾಂಧವರಲ್ಲಿ ತಾಳ-ಮೇಳವಿಲ್ಲದಂತಾಗಿದೆ. ಸಹೋದರ-ಸಹೋದರಿಯರಲ್ಲಿ ವಾತ್ಸಲ್ಯ ಮಮತೆಯ ಕೊಂಡಿ ಕಳಚುತ್ತಿದೆ. ಯಾರೂ ಯಾರನ್ನು ಸೇರಲಾರದಂತಹ ವಾತಾವರಣ ನಿರ್ಮಾಣವಾಗುತ್ತಿದೆ. ೧೯-೨೦ನೆಯ ಶತಮಾನದ ಪ್ರಾರಂಭದ ದಿನಗಳಲ್ಲಿ ಹೀಗಿರಲಿಲ್ಲ ಎಲ್ಲರನ್ನೂ ಹಚ್ಚಿಕೊಂಡು ಮಾತನಾಡಿಸುವುದಲ್ಲದೆ ಹಂಚಿಕೊಂಡು ತಿನ್ನುವ ಸ್ವಭಾವವಿತ್ತು. ಈಗ ದೋಚಿಕೊಂಡು ಅನ್ನುವುದು ಜೋರಾಗಿದೆ. ಧರ್ಮದಿಂದ ನಡೆ-ನುಡಿಗಳು ನಮ್ಮಿಂದ ದೂರವಾಗುತ್ತಿವೆ. ಹಣದ ದಾಸರಾಗಿ ಅದರ ಬೆನ್ನು ಹತ್ತಿರುವುದಂತೂ ಸತ್ಯ! ನಾವೆಲ್ಲರೂ ಒಂದರ್ಥದಲ್ಲಿ ಭ್ರಷ್ಟರೇ. ಏಕೆಂದರೆ ಕೊಡುವವರಿದ್ದೇವೆಯೆಂದ ಮೇಲೆ(ಭ್ರಷ್ಟರು) ಪಡೆಯುವವರಿದ್ದೇ ಇರುತ್ತಾರೆ! ಅಧಿಕಾರಿಗಳು ವಿವಿಧ ಇಲಾಖೆಗಳಲ್ಲಿಂದು ಅನೇಕರು ಲೋಕಾಯುಕ್ತರ ಕೈಯಲ್ಲಿ ಸಿಕ್ಕು ನರಳುತ್ತಾರೆ. ಆನಂತರದಲ್ಲಿ ಪಶ್ಚಾತ್ತಾಪ ಪಡುತ್ತಾರೆ. 'ಮಾಡಿದ್ದುಣ್ಣೋ ಮಹಾರಾಯ' ಎಂಬಂತಾಗಿದೆ. ರಾಜಕಾರಣಿಗಳ ಬಗೆಗೆ ಮಾತನಾಡುವುದೇ ಬೇಡ! ಸುಧಾರಣೆಯಾಗಲಾರದಷ್ಟು ಕೆಟ್ಟು ಹೋಗಿದೆ. ಎಸ್.ನಿಜಲಿಂಗಪ್ಪ, ಮೊರಾರ್ಜಿ ದೇಸಾಯಿ, ಲಾಲ್ ಬಹಾದ್ದೂರ್ ಶಾಸ್ತ್ರೀಜಿ, ಅಟಲ್‌ಜಿಯಂತಹ ಶುಭ್ರ ರಾಜಕಾರಣಿಗಳಿಂದ ಸಿಗುವುದು ದುರ್ಲಭ. ಧರ್ಮ ರಾಜಕಾರಣವೆಂದರೇನು ಎಂದು ಕೇಳುವವರಿದ್ದಾರೆ! ಹಗರಣಗಳ ಮೇಲೆ ಹಗರಣಗಳನ್ನು ಎಸಗುವವರಿದ್ದಾರೆ. 'ಬೇಲಿಯೇ ಎದ್ದು ಹೊಲ ಮೇಯ್ದರೆ ಕಾಯುವುದು ಯಾರನ್ನು' ಎಂಬಂತಾಗಿದೆ. ಅಂತೆಯೇ ನಾವಿಂದು ಭೀಕರ ಬರಗಾಲವನ್ನು ಎದುರಿಸುವಂತಾಗಿದೆ.

ಮಳೆ-ಬೆಳೆ ಸರಿಯಾಗಿದ್ದರೇನೆ ಶ್ರೀಸಾಮಾನ್ಯನು ತಿಂದುಂಡು ಸರಾಗವಾಗಿ ಉಸಿರಾಡಿಸಬಲ್ಲ! ೨೧ನೇ ಶತಮಾನದ ಪ್ರಾರಂಭದಿಂದಲೂ ಇಂತಹ ದುಷ್ಕಾಳ ವಿಪರೀತವಾಗಿದೆ. ರೈತರಂತೂ ಕಂಗಾಲಾಗಿದ್ದಾರೆ. ನಿಸರ್ಗ ಮುನಿದರೆ ಯಾರು ಏನೂ ಮಾಡಲಾರರು! ನಿಸರ್ಗವೇ ದೇವರು! 'ಸಂಕಟ ಬಂದಾಗ ವೆಂಕಟರಮಣ; ಎಂದೆನ್ನುವವರಾಗಿದ್ದೇವೆ. ಅದನ್ನು ಬಿಟ್ಟು ಧರ್ಮ ಮಾರ್ಗದ ಬಳಿವಿಡಿದು ನಡೆದದ್ದೇಯಾದರೆ ಸುಖಕಾಲ ಪ್ರಾಪ್ತವಾದೀತು. ನಮ್ಮದು ಋಷಿ ಮುನಿ-ಸಂತ-ಮಹಂತರ-ಯೋಗಿ ಶಿವಯೋಗಿಗಳ ಬೀಡು. ಭಾರತ ದೇಶದುದ್ದಗಲಕ್ಕೂ ಈ ಪರಂಪರೆ ಅದೆಷ್ಟೋ ಕೋಟಿ ವರ್ಷಗಳಿಂದಲೂ ಇತ್ತು. ಈಗಲೂ ಇದೆ. ಅಂತಹ ಪುಣ್ಯಾವತಾರಿಗಳು ಅನೇಕರಾಗಿ ಹೋಗಿದ್ದಾರೆ. ಈಗಲೂ ಇದ್ದಾರೆ. ನೋಡುವ ಕಣ್ಣು ಬೇಕಷ್ಟೆ! ನಾವು ವಿಶಾಲ ಹೃದಯಿಗಳಾಗಿ ನೋಡಬೇಕು. ಪ್ರತಿಯೊಬ್ಬನ ಬದುಕು ಸುಗಮವಾಗಿ ಸಾಗಬೇಕಾದರೆ ಧರ್ಮದ ಬಳಿವಿಡಿದು ಸಾಗಬೇಕು. ಒಳಿತು ಕಾರ್ಯಗಳ ನೆಸಗಿ, ಪುಣ್ಯ ಕರ್ಮವನೇ ಮಾಡಿ; ಗುರು-ಹಿರಿಯರನು ಪ್ರೀತ್ಯಾದರಗಳಿಂದ ಗೌರವಿಸುವುದು ಕಿರಿಯರ ಆದ್ಯ ಕರ್ತವ್ಯವಾಗಬೇಕು. ಇಂದಿನದು ಸ್ಪರ್ಧಾತ್ಮಕ ಪ್ರಪಂಚ: ದೇಶ, ದೇಶಗಳಲ್ಲಿ, ನಾಡು-ನಾಡುಗಳಲ್ಲಿ ಪೈಪೋಟಿಯಿರುವುದು ಸಹಜ! ಆದರೆ ಅದಕ್ಕೆ ತಕ್ಕ, ಪೂರಕವಾದ ಪ್ರಯತ್ನ ಮುಖ್ಯ!

*ನಿವೃತ್ತ ಪ್ರಾಚಾರ್ಯರು, 'ಹೊಂಬೆಳಕು', ಮನೆ. ನಂ. ೩, ಓಂ ಸ್ಕೂಲ್ ಹತ್ತಿರ, ಜನದರ್ಶಿನಿನಗರ, ಧಾರವಾಡ-೫೮೦ ೦೦೩.

'ನಿತ್ಯದ ಬದುಕಿನಲ್ಲಿ ಮನುಷ್ಯ ತಾನು ಅಂತರಂಗದಲ್ಲಿ ಬಹಿರಂಗದಲ್ಲಿ ಶುದ್ಧನಾಗಿ, ನೇರವಾಗಿ, ಸರಳವಾಗಿ ಬದುಕಿದರೆ ಸಮುದಾಯದ ಬದುಕು ತಾನಾಗಿಯೇ ಚೆನ್ನಾಗಿರುತ್ತದೆ' -ಡಾ|| ಗುರುಪಾದ ಮರಿಗುದ್ದಿ





ಕೇವಲ ದೇವರು ಮತ್ತು ದೈವಾನುಗ್ರಹಗಳ ಮೇಲೆಯೇ ಅವಲಂಬಿತರಾಗಬಾರದು! ಪ್ರಯತ್ನಕ್ಕೆ ಪ್ರತಿಫಲ ಸಿಕ್ಕೇ ಸಿಗುತ್ತದೆ. ಸತ್ಯ-ಪ್ರಾಮಾಣಿಕತೆಗೆ ಬೆಲೆ ಯಾವತ್ತೂ ಇದ್ದೇ ಇದೆ. ಸತ್ಯ ಹರಿಶ್ಚಂದ್ರ ಮಹಾರಾಜನು ಅದೆಷ್ಟು ಕಷ್ಟ ನಷ್ಟಗಳನ್ನು ಅನುಸರಿಸಿದನಲ್ಲವೆ? ಅದೇನು ಕಟ್ಟು ಕಥೆಯಲ್ಲ, ನಿಜದ ತಿರುಳಾಗಿದೆ. ಒಳ್ಳೆಯ ಮನಸ್ಸಿನಿಂದ ಮಾಡುವ ಪೂಜೆ ಮಹಾದೇವನಿಗೆ ಸಲ್ಲುತ್ತದೆ. ಧರ್ಮವಂತರಾಗಿ ನಯ-ವಿನಯದಿಂದ ನಡೆದುಕೊಂಡರೆ ದೇವನು ಮೆಚ್ಚುತ್ತಾನೆ. ಯಾರ ಮೇಲೆಯೂ ದ್ವೇಷ-ಅಸೂಯೆ ತಾಳದೇ ಎಲ್ಲರೂ ಒಂದೇ ಎಂಬ ಮನೋಭಾವನೆಯಿಂದ ಬದುಕಿದರೆ ಬದುಕಿಗೆ ನೆಮ್ಮದಿ ಸಿಗುತ್ತದೆ. ಆದುದರಿಂದ ಶರಣರ-ದಾಸರ ವಚನಗಳನ್ನು, ಕೀರ್ತನೆಗಳನ್ನು ಮೆಲುಕು ಹಾಕುತ್ತ ಅನುಷ್ಠಾನಕ್ಕೆ, ತರುವಂತಾಗಬೇಕು. ಧರ್ಮವು ಮನುಕುಲದ ಉದ್ಧಾರವನ್ನೇ ಹೆಗ್ಗುರಿಯಾಗಿಸಿಕೊಂಡಿತು.

ಧರ್ಮದ ಅಡಿಪಾಯ ಹಾಕಿದ, ಅದರ ಮೇಲೆಯೇ ಬದುಕಿದ ೧೨ನೆಯ ಶತಮಾನ ಬಸವಾದಿ ಶರಣರೇ ನಿದರ್ಶನವಾಗಿದ್ದಾರೆ. ಅಂದಿನ ಅಸಂಖ್ಯ ಶರಣ-ಶರಣೆಯರು ಭೂಲೋಕವನ್ನೇ ಕೈಲಾಸವನ್ನಾಗಿಸಿದರು. ಅವರೇನು ದೇವಲೋಕದಿಂದ ಬಂದವರಲ್ಲ. ಮನುಕುಲದ ಮಧ್ಯದಲ್ಲಿ ಜನ್ಮತಳೆದು, ಅವರ ಮಧ್ಯದಲ್ಲಿಯೇ ಬಾಳಿ ಕಾಯಕ-ದಾಸೋಹ ತತ್ತ್ವಗಳನ್ನು ಜಾರಿಗೆ ತಂದು ಪರಿಶುದ್ಧ ಬದುಕು ಬಾಳಿದವರು. ಅದಕ್ಕೆ ಅವರು ವಿಶ್ವಸಂದೇಶವನ್ನು ಕೊಟ್ಟಿದ್ದಾರೆ. 'ಮರ್ತ್ಯ ಲೋಕವೆಂಬುದು ಕರ್ತಾರನ ಕಮ್ಮಟವಯ್ಯಾ, ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು, ಇಲ್ಲಿ ಸಲ್ಲದವರು ಅಲ್ಲಿಯೂ ಸಲ್ಲರು' ಎಂದರಲ್ಲದೆ 'ಸತ್ಯವ ನುಡಿವುದೇ ದೇವಲೋಕ ಮಿಥ್ಯವ ನುಡಿವುದೆ ಮೃತ್ಯುಲೋಕ ಅಥವಾ ನರಕಲೋಕ'-ಇದು ಶರಣರ ಬದುಕಿನ ಸಂದೇಶವಾಗಿತ್ತು. ಶರಣರು ಕೇವಲ ಮಾತಿನ ಮಲ್ಲರಾಗಿರದೇ ನಡೆಯ ಧೀರರಾಗಿದ್ದರು. ಮೊದಲು ನಡೆದು ನಂತರ ನುಡಿಯುವುದು ಅವರ ಜೀವನಾದರ್ಶವಾಗಿತ್ತು. ಇಷ್ಟೆಲ್ಲ ಜೀವನ ಧರ್ಮದ ಸಂದೇಶಗಳ ರಾಶಿಯೇ ನಮ್ಮ ಮುಂದಿರುವಾಗ ಅವುಗಳನ್ನೋದಿ ಅರ್ಥೈಸಿಕೊಂಡು ಕಾರ್ಯಗತಗೊಳಿಸಿಕೊಂಡರೆ ಪ್ರತಿಯೊಬ್ಬನೂ ಶರಣನಾಗಬಲ್ಲನು. ಇಂತಹ ವಿಷಮ ಪರಿಸ್ಥಿತಿ ತಲೆದೋರಲಾರದು ಎಂಬುದು ನನ್ನ ತರ್ಕವಾಗಿದೆ. ಆದುದರಿಂದ ಆಚಾರಕ್ಕರಸಾಗು-ನೀತಿಗೆ ಪ್ರಭುವಾಗು-ಮಾತಿನಲಿ ಚೂಡಾಮಣಿಯಾಗಿ ನಡೆ-ನುಡಿಗಳಲ್ಲೊಂದಾಗು ಎಂದ ಸರ್ವವನು ಬಲ್ಲ ಸರ್ವಜ್ಞನು ಹೇಳಿದ ಮಾತು ಯಥೋಚಿತವಾಗಿದೆ. ಆದುದರಿಂದ ನಾವು-ನೀವೆಲ್ಲರೂ ಋಷಿ-ಮುನಿಗಳ ಪ್ರವಾದಿ-ದಾಸರ-ಸಂತರ ಮಾತುಗಳಿಗೆ ಮನ್ನಣೆ ಕೊಟ್ಟು ಗೌರವಿಸೋಣ. ಅನುಷ್ಠಾನಕ್ಕೆ ತಂದದ್ದೇಯಾದರೆ ಅವರು ಬದುಕಿದ ಕಾಲವೇ ಮರುಕಳಿಸಬಲ್ಲದೆಂಬ ಭರವಸೆ, ಧೈರ್ಯ ನನ್ನಲ್ಲಿದೆ. ಪ್ರತಿಯೊಬ್ಬರೂ ಈ ದಾರ್ಶನಿಕತೆಯ ಸಿದ್ಧಾಂತಗಳನ್ನು ಕಾರ್ಯಗತ ಮಾಡಿಕೊಳ್ಳಿರೆಂದು ಆ ಭಗವಂತನಲ್ಲಿ ಅನವರತವೂ ಪ್ರಾರ್ಥಿಸಿಕೊಳ್ಳುವೆನು.

ಶರಣು ಶರಣಾರ್ಥಿಗಳು ಸಕಲರಿಗೂ

ಜಂಬೂದ್ವೀಪ ನವಖಂಡ ಪೃಥ್ವಿಯೊಳಗೆ
ಕೇಳಿರಯ್ಯಾ ಎರಡಾಳಿನ ಭಾಷೆಯ
ಕೊಲುವೆನೆಂಬ ಭಾಷೆ ದೇವನದು,
ಗೆಲುವೆನೆಂಬ ಭಾಷೆ ಭಕ್ತನದು.
ಸತ್ಯವೆಂಬ ಕೂರಲಗನೆ ಕಳೆದುಕೊಂಡು
ಸದ್ಭಕ್ತರು ಗೆದ್ದರು ಕಾಣಾ ಕೂಡಲಸಂಗಮದೇವಾ.

* * *

ಜಂಗಮವಿರಹಿತ ಲಿಂಗಾರ್ಚನೆ, ಓಡ ಬಿಲವೆರೆದ
ಜಲದಂತೆ. ಜಂಗಮ ಸನ್ನಿಹಿತ ಲಿಂಗಾರ್ಚನೆ;
ಇದೆ ಭಕ್ತಿಗೆ ಪಥವಯ್ಯಾ. ಜಂಗಮ ಪ್ರಸಾದ
ಭೋಗೋಪಭೋಗವು; ಎನಗಿದೆ ಲಿಂಗಾರ್ಚನೆ.
ಬೇರೆ ಮತ್ತೊಂದನರಿದೆನಾದಡೆ,
ಕೂಡಲಸಂಗಮದೇವ ನರಕದಲ್ಲಿಕ್ಕುವ.

-ಬಸವಣ್ಣ

'ಬಸವಧರ್ಮದಲ್ಲಿ ಮಂದಿರಗಳಿಲ್ಲ ಮೂರ್ತಿಪೂಜೆಯಿಲ್ಲ ಯಜ್ಞಯಾಗಾದಿಗಳಿಲ್ಲ ಶೋಷಣೆ ಇಲ್ಲ ಅಸಮಾನತೆ ಇಲ್ಲ
-ಡಾ|| ರಂಜಾನ್‌ದರ್ಗಾ

# ಇಷ್ಟಲಿಂಗವೆಂಬುದು ಶಿವಲಿಂಗವಲ್ಲ

–ಭಾಲಚಂದ್ರ ಜಯಶೆಟ್ಟಿ *

**ಲಿಂ**ಗೋಪಾಸನೆ, ಲಿಂಗಪೂಜೆ, ಲಿಂಗದ ಸಂಕಲ್ಪನೆ ಇವು ಅತಿ ಪ್ರಾಚೀನವಾದುವೆಂದು ಚರಿತ್ರೆಯು ನಮಗೆ ಸಮರ್ಥನೆಯನ್ನು ನೀಡುತ್ತದೆ. ಲಿಂಗಕ್ಕೆ ಸಂಬಂಧಿಸಿದಂತೆ ಸಂಸ್ಕೃತದಲ್ಲಿ 'ಲಿಂಗಪುರಾಣ', 'ಶಿವಪುರಾಣ', 'ಸ್ಕಂದಪುರಾಣ' ಮುಂತಾದ ಅನೇಕ ಪುರಾಣಗಳಲ್ಲದೆ ಆಗಮಗಳೂ ರಚಿತವಾಗಿವೆ. ಲಿಂಗಕ್ಕೆ ಸಂಬಂಧಿಸಿದ ಅವಶೇಷಗಳು ಭಾರತದಲ್ಲಿಯಷ್ಟೇಯಲ್ಲ ಜಗತ್ತಿನಾದ್ಯಂತ ನೋಡಲು ಸಿಗುತ್ತವೆ. ವ್ಯಾಕರಣತೀರ್ಥ ಶ್ರೀ ಚಂದ್ರಶೇಖರ ಶಾಸ್ತ್ರಿ ಹಿರೇಮಠರು, ಯುರೋಫ್, ಗ್ರೀಸ್, ತುರ್ಕಸ್ಥಾನ, ಜಪಾನ್, ಶ್ರೀಲಂಕಾ, ಅಮೆರಿಕೆಯ ಪೇನ್ಯೂ ನಗರದಲ್ಲಿ ಈಗಲೂ ಲಿಂಗಪೂಜೆಯು ನಡೆಯುತ್ತಿದೆ ಮತ್ತು ಅನೇಕ ದೇಶಗಳಲ್ಲಿ ಅವುಗಳ ಅವಶೇಷಗಳು ಸಿಗುತ್ತವೆ ಎಂದು ಹೇಳುತ್ತಾರೆ. ಪ್ರಾಚೀನ ಕಾಲದಿಂದಲೂ ಈ ದೇಶಗಳಲ್ಲಿ ವಿವಿಧ ರೂಪದಿಂದ ಲಿಂಗಪೂಜೆಯು ಆಚರಣೆಯಲ್ಲಿ ಇತ್ತು ಮತ್ತು ಈಗಲೂ ಇದೆ ಎಂದು ಉಲ್ಲೇಖಿಸುತ್ತಾರೆ. (ಬಸವತತ್ತ್ವ ರತ್ನಾಕರ, ೧೯೬೧, ಪು. ೨೫೨–೨೫೫)

ಶಿವಲಿಂಗವನ್ನು ಸಾಮಾನ್ಯವಾಗಿ ಅನೇಕರು ತಿಳಿದುಕೊಂಡಿರುವುದು ಮತ್ತು ಹೆಚ್ಚಿನ ಉಲ್ಲೇಖಗಳು ಸಿಗುವುದು 'ಶಿಶ್ನದೇವ' ಎಂಬ ಅರ್ಥದಲ್ಲಿಯೇ. ಶಿವಲಿಂಗದ ಆಕಾರದ ವಿಶ್ಲೇಷಣೆ ಮಾಡುತ್ತ ಅದು ಶಿಶ್ನ ಮತ್ತು ಯೋನಿಯ ಶಾಶ್ವತ ಸಮಾಗಮದ ಸಂಕೇತವಾಗಿದೆ. ಅದನ್ನು ಪೂಜಿಸುವುದರ ಸಾಂಕೇತಿಕ ಅರ್ಥ ಸೃಜನಾತ್ಮಕ ಕ್ರಿಯೆಯನ್ನು ಪೂಜಿಸುವುದೇ ಆಗಿದೆ ಎಂದು ಹೇಳಲಾಗುತ್ತದೆ. ಸಿಂಧು ಕಣಿವೆಯ ನಾಗರಿಕತೆಯ ಆದಿವಾಸಿಗಳು ಲಿಂಗ ಮತ್ತು ಯೋನಿಯ ಸಂಯುಕ್ತ ಸ್ವರೂಪವಾದ ಶಿವಲಿಂಗ ವನ್ನು ಶಕ್ತಿಯ, ಸೃಜನದ ಮತ್ತು ಜ್ಞಾನದ ಮಾಧ್ಯಮವೆಂದು ಭಾವಿಸುತ್ತಿದ್ದರು ಎಂದು ಹೇಳಲಾಗುತ್ತದೆ. ತಂತ್ರಸಾಧನೆಯಲ್ಲಿಯೂ ಹೆಚ್ಚೂ ಕಡಿಮೆ ಇದೇ ಅರ್ಥ ಗ್ರಹಿಸಲಾಗಿದೆ.

ಇದೇ ಆಧಾರದ ಮೇಲೆ ಇಷ್ಟಲಿಂಗವೂ ಕೂಡ ಅವುಗಳ ಪೈಕಿ ಒಂದು ಎಂಬ ನಂಬಿಕೆ ಬೆಳೆದು ಬಂದಿದೆ. ನೆಲದ ಮೇಲೆ ಅಥವಾ ಪೀಠದ ಮೇಲೆ ಇಟ್ಟು ಪೂಜಿಸುವ ಬದಲು ಅದನ್ನು ಅಂಗೈಯಲ್ಲಿ ಇಟ್ಟುಕೊಂಡು ಪೂಜಿಸಲು ಅನುಕೂಲವಾಗುವಂಥ ಅಕಾರವನ್ನು ಕೊಟ್ಟು ಬಸವಣ್ಣನವರು ಇಷ್ಟಲಿಂಗವೆಂಬ ಒಂದು ಹೊಸ ಹೆಸರನ್ನು ನೀಡಿದರು, ಅದಕ್ಕೂ ಹೆಚ್ಚಿಗೆ ಏನನ್ನೂ ಮಾಡಲಿಲ್ಲ ಎಂದು ವಾದಿಸುವವರಿಗೇನೂ ಕೊರತೆಯಿಲ್ಲ. ಸ್ಥಾವರ ಸ್ವರೂಪದ ಚುಳುಕಾದ ಲಿಂಗದ ಮೇಲೆ ಕಂತಿಯನ್ನು ಕಟ್ಟಿದಷ್ಟೇ ಬಸವಣ್ಣನವರು ಮಾಡಿದ ಪರಿವರ್ತನೆ ಅಥವಾ ಸಂಸ್ಕರಣೆ ಎಂದು ಹೇಳುವವರಿದ್ದಾರೆ. ಆದರೆ ಬಸವಣ್ಣನವರು ಆವಿಷ್ಕರಿಸಿದ ಇಷ್ಟಲಿಂಗವು ಈ ಶಿಲಾಮೂರ್ತಿಗಳಿಂದ ತೀರಾ ಭಿನ್ನವಾದುದು. 'ಲಿಂಗ' ಎಂಬ ನಾಮಸಾಮ್ಯವೊಂದನ್ನು ಬಿಟ್ಟರೆ ಪ್ರಾಚೀನವಾದ ಕಲ್ಲಿನ ಲಿಂಗಕ್ಕೂ ಮತ್ತು ಬಸವಣ್ಣನವರು ಆವಿಷ್ಕರಿಸಿದ ಇಷ್ಟಲಿಂಗಕ್ಕೂ ಬೇರೆ ಇನ್ನಾವ ಬಾದರಾಯಣ ಸಂಬಂಧವೂ ಇಲ್ಲ. ಶಿವಲಿಂಗವೆಂದು ಚಾಲ್ತಿಯಲ್ಲಿರುವ ಲಿಂಗವು ಸಾಮಾನ್ಯವಾಗಿ ಕಲ್ಲಿನಿಂದ ಕೊರೆದು ಮಾಡಿದ್ದು ಅಥವಾ ನೈಸರ್ಗಿಕ ಕೊರೆತದಿಂದ ತಾನೇ ತಾನಾಗಿ ಆ ರೀತಿಯ ರೂಪು ತಳೆದ ಸ್ವಯಂಭೂ ಲಿಂಗವಾಗಿರಬಹುದು. ಇತ್ತೀಚೆಗೆ ಲೋಹ, ರತ್ನ, ಹರಳು, ಕಟ್ಟಿಗೆ, ಮಣ್ಣಿನಿಂದಲೂ ಲಿಂಗಗಳನ್ನು ತಯಾರಿಸುತ್ತಾರೆ. ಕರಣಾಗಮ(೬)ರ ಪ್ರಕಾರ ೧೨ ವಸ್ತುಗಳಿಂದ ಶಿವಲಿಂಗವು ತಯಾರಿಸಲ್ಪಡುತ್ತದೆ ಎಂದು ತಿಳಿದು ಬರುತ್ತದೆ. ಅವು ಯಾವುವೆಂದರೆ–ಮರಳು, ಅಕ್ಕಿ, ಅನ್ನ, ನದಿಯ ಮೃತ್ತಿಕೆ, ಆಕಳ ಸಗಣಿ, ಬೆಣ್ಣೆ, ರುದ್ರಾಕ್ಷಿ,

* 'ನಮ್ಮ ಮನೆ', ಜಯನಗರ, ಸೇಡಂ ರಸ್ತೆ, ಗುಲಬರ್ಗಾ–೫೮೫ ೧೦೫.

'ವೈರಾಗ್ಯವೆಂದರೆ ಪ್ರಪಂಚವನ್ನು ತ್ಯಜಿಸಿ ಓಡಿಹೋಗುವ ಪಲಾಯನವಾದವಲ್ಲ'
–ಪ್ರೊ. ಆರ್.ವ್ಹಿ. ಹೊರಡಿ





ಭಸ್ಮ, ಚಂದನ, ದರ್ಭೆ, ಹೂಮಾಲೆ ಮತ್ತು ಸಕ್ಕರೆ(ಪಾಕನಿಂದ). ಭಾರತದಲ್ಲಿ ಅತಿ ಪ್ರಾಚೀನವೆಂದು ಹೇಳಲಾಗುವ ಶಿವಲಿಂಗವು ಕಾಳಹಸ್ತಿಯ ಹತ್ತಿರದ ಪರುಶುರಾಮೇಶ್ವರಲಿಂಗ ಎಂಬ ಹೆಸರಿನ ಶಿವಲಿಂಗವು ಗುಡಿಮಲ್ಲಮ ಎಂಬ ಗ್ರಾಮದಲ್ಲಿದೆ. ಇದು ಕ್ರಿಪೂ. ೧–೨ ಶತಮಾನದ್ದೆಂದು ಹೇಳಲಾಗುತ್ತದೆ.

ಬಸವಣ್ಣನವರು ಆವಿಷ್ಕರಿಸಿದ ಇಷ್ಟಲಿಂಗವು ಈ ಬಗೆಯದಲ್ಲ. ಮೇಲೆ ಉಲ್ಲೇಖಿಸಿದ ಲಿಂಗಗಳನ್ನು ಸ್ಥಾವರ ಲಿಂಗ ಎಂದೂ ಮತ್ತು ಜೊತೆಯಲ್ಲಿ ಹೊತ್ತುಕೊಂಡು ಓಡಾಡಲು ಅನುಕೂಲವಾಗುವಂಥ ಲಿಂಗಗಳನ್ನು ಜಂಗಮ ಲಿಂಗವೆಂದು ಕರೆದು ಆ ಜಂಗಮಲಿಂಗಗಳೇ ಇಷ್ಟಲಿಂಗವೆಂದು ನಾವು ವ್ಯಾಖ್ಯಾನಿಸುತ್ತ ಬಂದಿದ್ದೇವೆ. ಆದರೆ ಸ್ಥಾವರ ಲಿಂಗವಾದರೇನು ಜಂಗಮಲಿಂಗವಾದರೇನು ಅವು 'ಲಿಂಗ–ಯೋನಿ'ಯ ಸಮಾಗದ ಪ್ರತೀಕಗಳಾದ ಕಲ್ಲು ಅಥವಾ ಬೇರೆ ಬೇರೆ ವಸ್ತುಗಳಿಂದ ತಯಾರಿಸದ ಪ್ರತೀಕಗಳೇ ಆಗಿರುತ್ತವೆ ಹೊರತು ಬಸವಣ್ಣನವರು ಆವಿಷ್ಕರಿಸಿದ ಇಷ್ಟಲಿಂಗವಲ್ಲ.

ಆದರೆ ಬಸವಣ್ಣನವರು ಆವಿಷ್ಕರಿಸಿದ ಇಷ್ಟಲಿಂಗವು ಲಿಂಗ–ಯೋನಿಯ ಸಂಯುಕ್ತ ಸ್ವರೂಪದ್ದಲ್ಲ ಎಂಬುದನ್ನು ನಾವು ತಿಳಿದುಕೊಳ್ಳಬೇಕಾಗಿದೆ. ಇದು ಸೃಜನದ ಪ್ರತೀಕವೋ ಅಥವಾ ಇನ್ನೇನೋ ಎಂದು ಕಲ್ಪಿಸಿಕೊಳ್ಳುವುದಕ್ಕಿಂತ ವಾಸ್ತವವಾಗಿ ಅದಕ್ಕೆ ವೈಜ್ಞಾನಿಕವಾಗಿ ಪ್ರಮಾಣೀಕರಿಸಬಹುದಾದಂಥ ಆಧಾರ ಏನಾದರೂ ಇದೆಯೇ ಎಂಬುದನ್ನು ವಿಶ್ಲೇಷಿಸಬೇಕಾಗಿದೆ. ಬಸವಣ್ಣನವರು ಆವಿಷ್ಕರಿಸಿದ ಇಷ್ಟಲಿಂಗವು ಅನೇಕ ವಸ್ತುಗಳನ್ನು ಬಳಸಿ ತಯಾರಿಸಿದ ಒಂದು ಸಾಧನವಾಗಿದೆ. ಕಲ್ಲನ್ನು ಕಟೆದು, ಮಣ್ಣಿನಿಂದ ತಯಾರಿಸಿದ ಅಥವಾ ಯಾವುದೇ ಒಂದು ಅಖಂಡ ವಸ್ತುವನ್ನು ಕೊರೆದು ಮಾಡಿದ ಲಿಂಗಪ್ರತೀಕ ಇದು ಅಲ್ಲ. ಚಂದ್ರಕಾಂತ ಶಿಲೆ (Moon Stone) ಎಂಬ ಒಂದು ಉಪರತ್ನವನ್ನು ಇದರ ಮಧ್ಯ ಭಾಗದಲ್ಲಿ ಅಳವಡಿಸಲಾಗುತ್ತದೆ. ಪ್ರಸಿದ್ಧವಾದ ಒಂಭತ್ತು ರತ್ನಗಳಲ್ಲದೆ ಇನ್ನೂ ಎಪ್ಪತ್ತೈದು ಉಪರತ್ನಗಳಿವೆ. ಅವುಗಳಲ್ಲಿ ಚಂದ್ರಕಾಂತ ಶಿಲೆಯೂ ಕೂಡ ಒಂದು ಉಪರತ್ನ. ಇದು ತೀರಾ ಬೆಲೆಬಾಳುವ ರತ್ನ. ನೋಡುವುದಕ್ಕೆ ಹಸುವಿನ ಹಲ್ಲಿಗೆ ಹೋಲುತ್ತದೆ. ಮುತ್ತಿಗೆ ಪರ್ಯಾಯವಾಗಿ ಇದನ್ನು ಬಳಸಬಹುದು ಎಂದು ಹೇಳುತ್ತಾರೆ. ಇದು ಚಿಕ್ಕಚಿಕ್ಕ ಚೂರುಗಳ ರೂಪದಲ್ಲಿ ಭಾರತ, ಮ್ಯೆನ್ಮಾರ್, ಉತ್ತರ ಅಮೆರಿಕಾ, ಶ್ರೀಲಂಕಾ, ಬ್ರೆಜಿಲ್ ಮತ್ತು ಸ್ವಿಟ್ಜರ್‌ಲ್ಯಾಂಡ್‌ಗಳಲ್ಲಿ ದೊರೆಯುತ್ತದೆ. ಪ್ರತಿಯೊಂದು ರತ್ನದಲ್ಲಿಯೂ ಕಾಂತೀಯ (ಚುಂಬಕೀಯ) ಗುಣವಿರುತ್ತದೆ. ಆ ಕಾಂತೀಯ ಗುಣವು ನಮ್ಮ ದೇಹದ ಮೇಲೆ ಪರಿಣಾಮವನ್ನು ಉಂಟುಮಾಡುತ್ತದೆ. ಪ್ರತಿಯೊಂದು ರತ್ನದ ಕಾಂತೀಯ ಗುಣವು ಭಿನ್ನಭಿನ್ನವಾಗಿರುವುದರಿಂದ ನಮ್ಮ ಶರೀರದ ಗುಣಧರ್ಮಕ್ಕೆ ಹೊಂದಿಕೊಳ್ಳುವಂಥ ರತ್ನವನ್ನು ಧರಿಸಬೇಕೆಂದು ಹೇಳುತ್ತಾರೆ. ಚಂದ್ರಕಾಂತ ಶಿಲೆಯು ಎಲ್ಲರ ಶರೀರದ ಗುಣಧರ್ಮಕ್ಕೆ ಹೊಂದಿಕೊಳ್ಳುವಂಥದ್ದು ಆಗಿದ್ದು ಆಧ್ಯಾತ್ಮಿಕ ಪರಿಣಾಮವನ್ನು ಉಂಟುಮಾಡುವ ಕಾಂತೀಯ ಗುಣ ಹೊಂದಿರುತ್ತದೆ. ಅದು ಬಣ್ಣ ಮತ್ತು ಬೆಳಕನ್ನು ಮೂರು ಆಯಾಮ(ಡೈಮೆನ್‌ಶನ್)ಗಳಲ್ಲಿ ಪ್ರತಿಫಲಿಸುತ್ತದೆ ಎಂಬುದು ಇಷ್ಟಲಿಂಗ ಸಾಧನೆಯಲ್ಲಿ ಅದನ್ನು ಬಳಸುವುದು ಒಂದು ಧನಾತ್ಮಕವಾದ ಗುಣವಿಶೇಷವಾಗಿದೆ. ಅದು ಪೀಯೂಷ ಗ್ರಂಥಿಯ (ಪೀನಿಯಲ್ ಗ್ಲ್ಯಾಂಡ್‌ದ) ಕಾರ್ಯವನ್ನು ಉದ್ದೀಪನಗೊಳಿಸಿ ಆಂತರಿಕ ಚೋದಕ(ಹಾರ್ಮೋನ್)ಗಳ ಆವರ್ತನೆಗಳನ್ನು ನಿಸರ್ಗದ ಲಯಕ್ಕೆ ಸಮತೋಲನವಾಗಿ ಹೊಂದಿಕೊಳ್ಳುವಂತೆ ಮಾಡುತ್ತದೆ. ಭಾವನಾತ್ಮಕವಾಗಿ ವ್ಯಕ್ತಿಯನ್ನು ತೆರೆದುಕೊಳ್ಳುವಂತೆ ಮಾಡುತ್ತದೆ. ಈ ಎಲ್ಲ ಗುಣಗಳನ್ನು ಅನುಲಕ್ಷಿಸಿ ಇಷ್ಟಲಿಂಗದ ಕೇಂದ್ರ ಸ್ಥಾನದಲ್ಲಿ ಅದನ್ನು ಅಳವಡಿಸುತ್ತಾರೆ. ಅದರ ಮೇಲ್ಮೈಗೆ ಕಂತಿಯ ಸರಿಯನ್ನು ಮೆತ್ತಿ ಈಗ ಬಳಕೆಯಲ್ಲಿರುವ ಇಷ್ಟಲಿಂಗದ ಆಕಾರ ಕೊಡಲಾಗುತ್ತದೆ.

ಕಂತಿಗಾಗಿ ಬಳಸುವ ಸರಿಯನ್ನು ತಯಾರಿಸಲು ಈ ಮುಂದಿನ ಘಟಕಾಂಶಗಳನ್ನು ಬಳಸುತ್ತಾರೆ. ಅರಗು, ರಾಳ, ಹಿಂಗುಲ, ಶಿಲಾರಸ, ರೂಮಾಮಸ್ತಿಕ– ಈ ಐದು ವಸ್ತುಗಳ ಜೊತೆಗೆ ಸಹಸ್ರಾಂಜನ ($Sb_2S_3$ - Stybnite), ಸ್ರೋತೋ ಅಂಜನ ($Sb_2S_3$ -Antimony Sulphide),

'ನಾನು ಪರಸೇವೆಯ ಮಾಡುವೆನಯ್ಯಾ ಜಂಗಮದಾಸೋಹಕ್ಕೆಂದು' –ಬಸವಣ್ಣನವರು

ನೀಲಾಂಜನ (PbS), ಪುಷ್ಪಾಂಜನ (ZnO - Zinc Oxide), ರಸಾಂಜನ (Yellow Oxide of Mercury) ಈ ಎಲ್ಲಾ ವಸ್ತುಗಳನ್ನು ಕೇರು(ಗೇರು) ಎಣ್ಣೆಯಲ್ಲಿ ಬೆರೆಸಿ ಸರಿ ಮಾಡಿಕೊಳ್ಳಲಾಗುತ್ತದೆ. ಆ ಸರಿಯಲ್ಲಿ ತುಪ್ಪದ ದೀಪದಲ್ಲಿ ಹಿಡಿದ ಕಾಡಿಗೆಯನ್ನು ಸೇರಿಸಿ ಒಂದು ಹದಕ್ಕೆ ಕಣಕದ ಹಾಗೆ ಪೇಸ್ಟ್ (ಮುದ್ದೆ) ಮಾಡಿಕೊಳ್ಳಲಾಗುತ್ತದೆ. ಈ ಮುದ್ದೆಯನ್ನು ಚಂದ್ರಕಾಂತ ಶಿಲೆಯ ಮೇಲೆ ಲೇಪಿಸಿ ನಿರ್ದಿಷ್ಟವಾದ ಅಳತೆಯಲ್ಲಿ ಆಕಾರ ಕೊಡಲಾಗುತ್ತದೆ.

ಇಷ್ಟಲಿಂಗದ ಆಕಾರ ಹೀಗೇ ಏಕೆ? ಎಂಬ ಜಿಜ್ಞಾಸೆ ಉಂಟಾಗಬಹುದು. ಅದಕ್ಕೂ ವೈಜ್ಞಾನಿಕವಾದ ಆಧಾರವಿದೆ. ಮನುಷ್ಯನ ದೇಹದಲ್ಲಿ ಅತ್ಯಂತ ರಹಸ್ಯಮಯವಾದ ಅಂಗ ವೆಂದರೆ ಮೆದುಳು. ಮೆದುಳಿನ ಕಾರ್ಯವಿಧಾನದ ಕುರಿತು ಸಂಪೂರ್ಣವಾಗಿ ಇದುವರೆಗೂ ವಿಜ್ಞಾನಿಗಳಿಗೆ ತಿಳಿದು ಬಂದಿಲ್ಲ. ಆ ಮೆದುಳಿನ ಮಧ್ಯದಲ್ಲಿ ಪೀನಿಯಲ್ ಗ್ರಂಥಿ ಎಂಬ ಶಂಕುವಿನ ಆಕಾರಕ್ಕೆ ಹತ್ತಿರವಾದ ಶೇಂಗಾ(ಕಡಲೆ ಕಾಯಿ) ಬೀಜದಂಥ ಒಂದು ಗ್ರಂಥಿ ಇರುತ್ತದೆ. ಅದರ ಗಾತ್ರ ೫ ಮಿ.ಮಿ.><೭ ಮಿಮಿ ಇದ್ದು ೧೨೦ ಮಿ.ಗ್ರಾಂ. ತೂಕ ಹೊಂದಿರುತ್ತದೆ. ಮನುಷ್ಯನಲ್ಲಿರುವ ಪೀಯೂಷ ಗ್ರಂಥಿಯ ತೂಕ ದಿನದಿಂದ ದಿನಕ್ಕೆ ಕಡಿಮೆಯಾಗುತ್ತಿದೆ ಎಂದು ವಿಜ್ಞಾನಿಗಳು ಹೇಳುತ್ತಾರೆ. ಜೀವಿಗಳ ಕಾರ್ಯ ವ್ಯಾಪಾರಗಳನ್ನು ನಿಯಂತ್ರಿಸುವುದು, ನಿರ್ದೇಶಿಸುವುದು ಈ ಪೀನಿಯಲ್ ಗ್ರಂಥಿ ಅಥವಾ ಪೀಯೂಷ ಗ್ರಂಥಿಯೇ ಆಗಿರುತ್ತದೆ ಮೆದುಳಿನಲ್ಲಿ ಇದು ನೆಲೆಗೊಂಡಿರುವ ಸ್ಥಾನವು ಈಗ ನಮ್ಮೆದುರಿಗಿರುವ ಇಷ್ಟಲಿಂಗದ ಆಕಾರದಲ್ಲಿರುತ್ತದೆ. ಆ ಸ್ಥಾನದ ಆಕಾರದ ಆಧಾರದ ಮೇಲೆಯೇ ಇಷ್ಟಲಿಂಗದ ಆಕಾರವನ್ನು ರೂಪಿಸಲಾಗಿದೆ. ಇಷ್ಟಲಿಂಗದ ಸಾಧನೆಯಲ್ಲಿ ಪೀಯೂಷ ಗ್ರಂಥಿಯು ಹೇಗೆ ಪ್ರಚೋದಿತವಾಗುತ್ತದೆ ಎಂದು ವಿಚಾರವನ್ನು ನಾವು ಮುಂದೆ ನೋಡೋಣ.

ಇಷ್ಟಲಿಂಗದ ತಯಾರಿಯಲ್ಲಿ ಬಳಸಲಾಗುವ ಚಂದ್ರ ಕಾಂತ ಶಿಲೆಯಿಂದ ಹಿಡಿದು ಉಳಿದ ಎಲ್ಲಾ ಘಟಕಗಳು ಕಾರ್ಬನ್ನಿನ ಸಂಯುಕ್ತ ವಸ್ತುಗಳಾಗಿವೆ ಎಂಬುದು ತಿಳಿದು ಬರುತ್ತದೆ. ಇಲ್ಲಿ ಕಾರ್ಬನ್ನೇ ಪ್ರಮುಖ ಘಟಕವಾಗಿದ್ದರೂ ಅದೊಂದೇ ಪರಿಣಾಮ ಬೀರುತ್ತದೆ ಎಂದು ಅರ್ಥವಲ್ಲ. ಅದರ ವಿಭಿನ್ನ ಸಂಯುಕ್ತಗಳು ಒಂದಕ್ಕೊಂದು ಪೂರಕವಾಗಿ ಇಷ್ಟಲಿಂಗದಲ್ಲಿ ಉದ್ದೀಪನದ ಕೆಲಸ ಮಾಡುತ್ತವೆ. ಸ್ವಲ್ಪ ವಿಷಯಾಂತರ ಅನಿಸಿದರೂ ಇಷ್ಟಲಿಂಗದ ಅನುಭೂತಿಯನ್ನು ಅರ್ಥ ಮಾಡಿಕೊಳ್ಳಲು ಅನುಕೂಲವಾಗಲೆಂಬ ಕಾರಣ ಕ್ಕಾಗಿ ಇಲ್ಲಿ ಕಾರ್ಬನ್ ಕುರಿತು ಒಂದಿಷ್ಟು ವಿಚಾರಗಳನ್ನು ತಿಳಿದುಕೊಳ್ಳುವುದು ಸೂಕ್ತವೆನಿಸುತ್ತದೆ.

ಹತ್ತೊಂಬತ್ತನೆಯ ಶತಮಾನದ ಆರಂಭದಲ್ಲಿ ಡಾಲ್ಟನ್ ಎಂಬ ವಿಜ್ಞಾನಿಯು ಮೂಲಧಾತುವಿನ ಅತಿ ಸಣ್ಣ ಸ್ವರೂಪ ವೆಂದರೆ 'ಅಣು' ಎಂದು ಕಂಡುಹಿಡಿದು, ಆ 'ಅಣು'ವನ್ನು ವಿಭಜಿಸಲಾಗುವುದಿಲ್ಲ ಎಂದು ಹೇಳಿದನು. ಮುಂದೆ ೧೮೯೭ರಲ್ಲಿ ಎಲೆಕ್ಟ್ರಾನ್‌ಗಳ ಸಂಶೋಧನೆಯಾಗಿ ಮುಂದೆ ೧೯೧೧ರಲ್ಲಿ ರುದರ್‌ಫೋರ್ಡ್ ಎಂಬ ವಿಜ್ಞಾನಿಯು ಅಣುವಿನಲ್ಲಿ ಎಲೆಕ್ಟ್ರಾನ್‌ಗಳಲ್ಲದೆ ಪ್ರೋಟಾನ್ ಮತ್ತು ನ್ಯೂಟ್ರಾನ್ ಎಂಬ ಅಂಶಗಳೂ ಒಳಗೊಂಡಿರುತ್ತವೆ ಎಂಬು ದನ್ನು ಕಂಡು ಹಿಡಿದನು. ೧೯೧೩ರಲ್ಲಿ ಡ್ಯಾನಿಶ್‌ನ ವಿಜ್ಞಾನಿ ಯಾದ ನೀಲ್ಸ್ ಬೋಹ್ರ ಎನ್ನುವವನು ಇನ್ನೂ ಒಂದು ಹೊಸ ಸಂಗತಿಯನ್ನು ಪತ್ತೆ ಹಚ್ಚಿದನು. ಮೂಲಧಾತುವಿನ ಪ್ರತಿಯೊಂದು ಅಣುವು ತನ್ನ ಕೇಂದ್ರದಲ್ಲಿ ನ್ಯೂಕ್ಲಿಯಸ್‌ನ್ನು ಹೊಂದಿರುತ್ತದೆ. ಸೌರಮಂಡಲದ ಹಾಗೆ ಆ ನ್ಯೂಕ್ಲಿಯಸ್ಸಿನ ಸುತ್ತ ಎಲೆಕ್ಟ್ರಾನ್‌ಗಳು ಒಂದು ಕಕ್ಷೆಯನ್ನು ಮಾಡಿಕೊಂಡು ಆ ಕಕ್ಷೆಯಲ್ಲಿ ನಿರಂತರ ಸುತ್ತುತ್ತಿರುತ್ತವೆ. ಪ್ರತಿಯೊಂದು ಮೂಲಧಾತುವಿನ ಅಣುವಿನಲ್ಲಿಯ ಎಲೆಕ್ಟ್ರಾನ್‌ಗಳ ಸಂಖ್ಯೆಯು ಭಿನ್ನಭಿನ್ನವಾಗಿ ನಿರ್ಧರಿಸಲ್ಪಟ್ಟಿರುತ್ತದೆ. ನ್ಯೂಕ್ಲಿಯಸ್ಸಿನ ವಿಭಿನ್ನ ಊರ್ಜ(ಶಕ್ತಿ ಸಾಮರ್ಥ್ಯ)ದ ಮಟ್ಟದಲ್ಲಿ ಈ ಎಲೆಕ್ಟ್ರಾನ್‌ಗಳು ತಮ್ಮ ಕಕ್ಷೆಯನ್ನು ನಿರ್ಮಿಸಿಕೊಂಡಿರುತ್ತವೆ.

ಕಾರ್ಬನ್ ಅಣುವಿನ ನ್ಯೂಕ್ಲಿಯಸ್ಸನ್ನು ಸುತ್ತುವರಿದ ಕಕ್ಷೆಯಲ್ಲಿ ನಾಲ್ಕು ಎಲೆಕ್ಟ್ರಾನ್‌ಗಳಿರುತ್ತವೆ. ಅವು ಕಂಬನಿ ಸ್ವರೂಪದ ಮೋಡಗಳಿಂದ ಚತುರ್ಮುಖಿ ವ್ಯವಸ್ಥೆಯನು ಹೊಂದಿರುತ್ತವೆ. ಈ ಮೋಡಗಳ ನಡುವೆಯೇ ಎಲೆಕ್ಟ್ರಾನ್

'ಬದಲಾವಣೆ ಎನ್ನುವುದು ಜೀವಂತಿಕೆಯ ಲಕ್ಷಣ' –ಡಾ|| ಎಸ್. ವಿದ್ಯಾಶಂಕರ್





ಗಳು ತಮ್ಮ ಹೆಚ್ಚಿನ ಸಮಯವನ್ನು ಕಳೆಯುತ್ತವೆ. ಎಲೆಕ್ಟ್ರಾನ್ ಗಳು ಈ ಕಕ್ಷೆಯಲ್ಲಿ ತುಂಬ ವೇಗವಾಗಿ ಚಲಿಸುತ್ತ ಕಂಬನಿ ಯಾಕಾರದ ಮೋಡಗಳ ಮೇಲ್ಮೈಯಲ್ಲಿ ಸುರುಳಿಗಳನ್ನು ನಿರ್ಮಿಸುತ್ತವೆ. ಈ ಹೊಸ ಸಂಶೋಧನೆಯು ಭಾರತದ ಒಬ್ಬ ಸಂತ ಹಾಗೂ ರಹಸ್ಯ ಸಾಧಕರಿಂದ ಬೆಳಕಿಗೆ ಬಂದಿದೆ. (ಆ ಸಾಧಕರ ಹೆಸರು ತಿಳಿದು ಬಂದಿಲ್ಲ. ಟೈಮ್ಸ್ ಆಫ್ ಇಂಡಿಯಾದ ದಿನಾಂಕ ೨೦-೧೧-೨೦೦೮ರ ಬೆಂಗಳೂರು ಆವೃತ್ತಿಯಲ್ಲಿ ಪ್ರಕಟವಾದ ಲೇಖನದ ಕರ್ತೃ ಸದ್ಗುರು ಜಗ್ಗಿ ವಾಸುದೇವ ಇರಬಹುದೇ? ಎಂದು ಅನುಮಾನ) ಕಾರ್ಬನ್ನಿನ ಅಣುವಿಗೆ ಸಂಬಂಧಿಸಿದ ಈ ಸಂಗತಿಯನ್ನು ಆ ಸಾಧಕರ ಶಿಷ್ಯರು ಅಭಿವೃದ್ಧಿಪಡಿಸಲು ಕಾರ್ಯನಿರತ ರಾದರು. ಅವರಲ್ಲಿ ರಸಾಯನ ಶಾಸ್ತ್ರಜ್ಞನಾದ ಒಬ್ಬ ಶಿಷ್ಯನು ಸತತವಾಗಿ ಮಾಡಿದ ಆಳವಾದ ಧ್ಯಾನದಲ್ಲಿ ಈ ಮುಂದಿನ ಸಂಗತಿಗಳನ್ನು ಅನುಭವಕ್ಕೆ ತಂದುಕೊಂಡನು.

ಎಲೆಕ್ಟ್ರಾನುಗಳ ಅತ್ಯುಚ್ಚವಾದ ಸಂಭಾವ್ಯ ಕಕ್ಷೆಯು ಕಾರ್ಬನ್ನಿನ ನ್ಯೂಕ್ಲಿಸ್ಸಿನ ಸುತ್ತ ಸುರುಳಿ ಸುರುಳಿಯಾದ ಅಲೆಗಳನ್ನು ಉಂಟು ಮಾಡುತ್ತದೆ. ಈ ವಿನ್ಯಾಸವನ್ನು ನಿರ್ದಿಷ್ಟವಾದ ಕೋನದಿಂದ ನೋಡಿದಾಗ ಭೌತವಿಜ್ಞಾನಿಯು ನಿಬ್ಬೆರಗಾದನು. ಸುರುಳಿ ಸುರುಳಿಯಾದ ಅಲೆಗಳು ನಾವು ಗುರುತಿಸಬಹುದಾದಂಥ ಸಾಂಕೇತಿಕ ಚಿಹ್ನೆಗಳನ್ನು ಹೊಂದಿ ದ್ದವು. ಮೊದಲನೆಯ ನೋಟಕ್ಕೆ ಮೂರು ಡೈಮೆನ್ಷನ್‌ಗಳಲ್ಲಿ ಓಂಕಾರವು ಕಾಣಿಸಿತು. ಇನ್ನೊಂದು ಮಗ್ಗುಲಿನಿಂದ ನೋಡಿದಾಗ ಆ ಓಂಕಾರವು ಸಪಾಟಾಗಿ ಎರಡು ಡೈಮೆನ್ಷನ್ ನಲ್ಲಿ ಸ್ವಾಸ್ತಿಕವಾಗಿ ಕಾಣಿಸಿತು. ಈ ಮಾದರಿಯನ್ನು ತಿರುಗಿಸಿ ಇನ್ನೊಂದು ಕೋನದಿಂದ ನೋಡಿದಾಗ ಗ್ರೀಕ್ ಅಕ್ಷರ ಗಳಾದ ಆಲ್ಫಾ ಮತ್ತು ಒಮೆಗಾದ ಹಾಗೆ ಕಂಡು ಬಂದವು. ನಿಜಕ್ಕೂ ಇದು ಬೆರಗುಗೊಳಿಸುವ ಸಂಗತಿಯೇ ಆಗಿದೆ.

ಈ ಸಿದ್ಧಾಂತದ ಪ್ರಕಾರ ವಿಶ್ವದ ಸಂಕೇತಗಳನ್ನು ಕಾರ್ಬನ್ ಅಣುವು ತನ್ನಲ್ಲಿ ಒಳಗೊಂಡಿರುತ್ತದೆ ಎಂದು ತಿಳಿದು ಬರುತ್ತದೆ. ಇದರಿಂದ ಸಿದ್ಧಪುರುಷರು ಅನುಭವಿ ಸಿರುವ ದಿವ್ಯಚೈತನ್ಯದ ಅಭಿವ್ಯಕ್ತಿಯೇ ಈ ಭೌತ ಜಗತ್ತಾಗಿದೆ ಎಂಬ ಸತ್ಯ ಪ್ರಮಾಣಿತವಾಗುತ್ತದೆ.

ವಿಷಯಾಂತರವಾಗಿ ಇಷ್ಟೆಲ್ಲ ಹೇಳಿದುದರ ಉದ್ದೇಶ ವೆಂದರೆ ಕಾರ್ಬನ್ನಿನ ಗುಣಧರ್ಮ ಹೊಂದಿರುವ ಇಷ್ಟ ಲಿಂಗವು ಶಿವಯೋಗ ಸಾಧನೆಯಲ್ಲಿ ಹೇಗೆ ಪ್ರವರ್ತಿಸುತ್ತದೆ. ಮತ್ತು ಆ ಮೂಲಕ ಅದು ಅಷ್ಟಾವರಣದಲ್ಲಿ ಎಂಥ ಮಹತ್ವದ ಸ್ಥಾನ ಹೊಂದಿರುತ್ತದೆ ಎಂಬುದನ್ನು ವಿವರಿಸು ವುದೇ ಆಗಿದೆ. ಇಷ್ಟಲಿಂಗವನ್ನು ಎಡಅಂಗೈಯಲ್ಲಿ ಇಟ್ಟು ಕೊಂಡು ದೃಷ್ಟಿಯಿಂದ ಅನುಕೂಲವಾದ ದೂರದಲ್ಲಿ ಹಿಡಿದು ಅದರಲ್ಲಿ ಏಕಾಗ್ರತೆಯಿಂದ ದೃಷ್ಟಿಯನ್ನು ಕೇಂದ್ರೀ ಕರಿಸಲಾಗುತ್ತದೆ. ಇದಕ್ಕೆ ತ್ರಾಟಕ ಯೋಗವೆಂದು ಕರೆಯುತ್ತಾರೆ. ಇತರ ಯೋಗ ಸಾಧನೆಗಳಲ್ಲಿ ಯಮ, ನಿಯಮ ಮುಂತಾದ ಅಷ್ಟಾಂಗ ಯೋಗದ ಅಭ್ಯಾಸದ ಬಲದಿಂದ ಮೂಲಾಧಾರ ಚಕ್ರದಲ್ಲಿ ಸುಪ್ತವಾಗಿರುತ್ತದೆ ಎಂದು ನಂಬಲಾಗಿರುವ ಕುಂಡಲಿನಿ ಶಕ್ತಿಯನ್ನು ಜಾಗ್ರತ ಗೊಳಿಸಿ ಅದನ್ನು ಸಹಸ್ರಾರು ಅಂದರೆ ಬ್ರಹ್ಮ ಚಕ್ರಕ್ಕೆ ಏರಿಸ ಬೇಕೆಂದು ಹೇಳಲಾಗುತ್ತದೆ. ಆದರೆ ಇಷ್ಟಲಿಂಗದ ಸಾಧನೆ ಯಲ್ಲಿ ಬೇರೆ ಯಾವ ಚಕ್ರಗಳ ಗೋಜಿಗೂ ಹೋಗದೆ ಭ್ರೂಮಧ್ಯದಲ್ಲಿ ಇದೆ ಎಂದು ಕಲ್ಪಿಸಿಕೊಂಡಿರುವ ಆಜ್ಞಾಚಕ್ರದ ಮೇಲೆ ಧ್ಯಾನವನ್ನು ಕೇಂದ್ರೀಕರಿಸಿ ಭ್ರೂಮಧ್ಯದಲ್ಲಿರುವ ಅತ್ಮ ತತ್ವವನ್ನು ಚಿತ್‌ಕಳೆ ಯಿಂದ ಜಾಗ್ರತಗೊಳಿಸಿ ಆ ಚಿತ್‌ಪ್ರಕಾಶವು ಪಂಚೇಂದ್ರಿಯ ಗಳ ಮುಖಾಂತರ ಪ್ರಜ್ವಲಿಸುವಂತೆ ಮಾಡಲಾಗುತ್ತದೆ.

ಇಷ್ಟಲಿಂಗವನ್ನು ಎಡ ಅಂಗೈಯಲ್ಲಿಟ್ಟುಕೊಂಡು ತ್ರಾಟಕ ಅಂದರೆ ದೃಷ್ಟಿಯೋಗ ಮಾಡಲಾಗುತ್ತದೆ. ಇದಕ್ಕೂ ಒಂದು ಪ್ರಬಲವಾದ ವೈಜ್ಞಾನಿಕ ಕಾರಣವಿದೆ. ಮಾನವ ಶರೀರದಲ್ಲಿ ಅತ್ಯಂತ ರಹಸ್ಯಮಯವಾದ ಅಂಗವೆಂದರೆ ನಮ್ಮ ಮೆದುಳು. ಅದರ ಕಾರ್ಯಕ್ಷಮತೆಯು ಎಷ್ಟು ಎಂಬುದು ಇನ್ನೂ ವಿಜ್ಞಾನಿಗಳಿಗೂ ತಿಳಿದು ಬಂದಿಲ್ಲ. ೧೯೩೭ರಲ್ಲಿ ಪಶ್ಚಿಮ ಜರ್ಮನಿಯ ಬಾನ್ ವಿಶ್ವವಿದ್ಯಾಲಯದ ಕಪಾಲ ಸಾಮುದ್ರಿಕ ಶಾಸ್ತ್ರಜ್ಞರ (Phrenologists)ಒಂದು ತಂಡವು ನೊಬೆಲ್

'ಬಸವಣ್ಣನವರಂತೆ ಹದಿನಾರಾಣೆ ಕನ್ನಡಿಗರಲ್ಲಿ ಯಾವ ಮಹಾಪುರುಷರೂ ಇಲ್ಲ'
- ಶ್ರೀ ಬೆನಗಲ್ ರಾಮರಾವ್

ಪ್ರಶಸ್ತಿ ವಿಜೇತರಾದ ಕೆಲವು ವಿದ್ವಾಂಸರ ಮೆದುಳಿನ ತಂತುಗಳಲ್ಲಿಯ ನಿರ್ದಿಷ್ಟವಾದ ಉತ್ತೇಜನ ಕ್ರಿಯೆಯನ್ನು ತಿಳಿಯಲು ಒಂದು ವೈಜ್ಞಾನಿಕ ಅಧ್ಯಯನವನ್ನು ನಡೆಯಿಸಿತು. ನೊಬೆಲ್ ಪ್ರಶಸ್ತಿ ವಿಜೇತರ ಮೆದುಳಿನ ೯೦% ಭಾಗವು ಜಡ ಅಥವಾ ನಿಷ್ಕ್ರಿಯವಾಗಿದ್ದು ೧೦% ಭಾಗ ಮಾತ್ರ ಸಕ್ರಿಯ ಅಥವಾ ಪ್ರಜ್ಞಾಪೂರ್ಣವಾಗಿರುತ್ತದೆ ಎಂಬುದನ್ನು ಆ ಅಧ್ಯಯನ ತಂಡ ಪ್ರಕಟಿಸಿತು. ನೊಬೆಲ್ ಪ್ರಶಸ್ತಿ ಪಡೆದ ಜ್ಞಾನಿಗಳ ಮೆದುಳಿನ ಕ್ರಿಯಾಶೀಲತೆಯೇ ಇಷ್ಟೊಂದು ಕಡಿಮೆ ಇರ ಬೇಕಾದರೆ ಸಾಮಾನ್ಯ ಜನರ ಮೆದುಳಿನ ಸ್ಥಿತಿ ಏನಾಗಿರುತ್ತದೆ ಎಂಬುದನ್ನು ಕಲ್ಪಿಸಲೂ ಕೂಡ ಸಾಧ್ಯವಿಲ್ಲ. ಮೆದುಳಿನ ತಂತುಗಳ ಅಪೂರ್ಣ ಬೆಳವಣಿಗೆಯೇ ಈ ನಿಷ್ಕ್ರಿಯತೆಗೆ ಕಾರಣವೆಂದು ಅವರ ಅಧ್ಯಯನ ತಿಳಿಸುತ್ತದೆ. ಅಮೆರಿಕೆಯ ಡ್ಯೂಕ ವಿಶ್ವವಿದ್ಯಾಲಯದ ಡಾ. ಲೆನಡ್ ರಿವಿಜ್‌ರ ಜೊತೆಗೆ ಒಂದು ತಂಡವು ಈ ಅಧ್ಯಯನಕ್ಕೆ ಸಂಬಂಧಿಸಿದಂತೆ ಕೆಲವು ಪ್ರಯೋಗಗಳನ್ನು ನಡೆಸಿತು. ಆಧ್ಯಾತ್ಮ ವಿಜ್ಞಾನದಿಂದ (ಸಾಧನೆ ಯಿಂದ) ಮಾತ್ರ ಮೆದುಳಿನಲ್ಲಿ ಹೆಚ್ಚಿನ ಉತ್ತೇಜನವನ್ನು ಉಂಟುಮಾಡಬಹುದೆಂದು ಆ ತಂಡ ಅಭಿಪ್ರಾಯಪಟ್ಟಿತು.

ಭಾರತದಲ್ಲಿ ಅಂಥ ಆಧ್ಯಾತ್ಮ ಸಾಧನೆಯ ಅನೇಕ ಮಾರ್ಗಗಳಿವೆ. ಉದಾಹರಣೆಗೆ ಜ್ಞಾನಯೋಗ, ಕರ್ಮ ಯೋಗ, ಭಕ್ತಿಯೋಗ, ರಾಜಯೋಗ, ಹಠಯೋಗ, ಧ್ಯಾನ ಯೋಗ, ಮಂತ್ರಯೋಗ, ಲಯಯೋಗ, ಕುಂಡಲಿನಿ ಯೋಗ ಮುಂತಾದವುಗಳನ್ನು ಹೆಸರಿಸಬಹುದು. ಪ್ರಾಚೀನವೆಂದು ಹೇಳಲಾಗುವ ಯೋಗಮಾರ್ಗಗಳಲ್ಲಿ ಇಷ್ಟಲಿಂಗೋಪಾಸನೆಯ ಮೂಲಕ ಮಾಡುವ ಯೋಗ ವಿಧಾನದ ಉಲ್ಲೇಖ ಎಲ್ಲಿಯೂ ಇಲ್ಲ. ಇದಕ್ಕೆ ಕಾರಣವೆಂದರೆ ಇದರ ಆವಿಷ್ಕಾರವಾದುದೇ ಹನ್ನೆರಡನೆಯ ಶತಮಾನದಲ್ಲಿ, ಬಸವಣ್ಣನವರಿಂದ. ಆದ್ದರಿಂದ ಇದನ್ನು ಎಲ್ಲಾ ಯೋಗಗಳಿಗಿಂತ ಪರಿಷ್ಕೃತವಾದ ಯೋಗವೆಂದು ಹೇಳಿದರೆ ಬಹುಶಃ ಅಪಚಾರದ ಮಾತಾಗಲಾರದು. ಇಷ್ಟಲಿಂಗ ಸಾಧನೆಯು ಎಲ್ಲ ಯೋಗಮಾರ್ಗಗಳಿಗಿಂತ ತುಂಬ ಸುಲಭವಾದುದು ಎಂದು ಪರಿಗಣಿಸಲಾಗುತ್ತದೆ. ಅದು ಹೇಗೆ ಎಂಬುದನ್ನು ನಾವೀಗ ಪರಿಶೀಲಿಸುವ.

ಇಷ್ಟಲಿಂಗವನ್ನು ಎಡಅಂಗೈಯಲ್ಲಿ ಇಟ್ಟುಕೊಂಡು ಸಾಧನೆ ಮಾಡುವುದಕ್ಕೆ ವೈಜ್ಞಾನಿಕ ಕಾರಣವಿದೆ ಎಂದು ನಾವು ಮೇಲೆ ಹೇಳಿದೆವು. ಅದು ಹೇಗೆ? ನಮ್ಮ ಮೆದುಳಿನ ಎದುರು ಭಾಗದಲ್ಲಿ ಒಂದು ಸೀಳು ಇದ್ದು ಆ ಸೀಳು ಮೆದುಳನ್ನು ಎರಡು ಭಾಗಗಳಾಗಿ ವಿಂಗಡಿಸಿರುವ ಹಾಗೆ ಕಾಣುತ್ತದೆ. ಮೆದುಳಿನ ಬಲಭಾಗವು ನಮ್ಮ ದೇಹದ ಎಡ ಭಾಗದ ಎಲ್ಲ ಅಂಗಗಳೊಂದಿಗೆ, ನರನಾಡಿಗಳೊಂದಿಗೆ ಸಂಪರ್ಕ ಹೊಂದಿದ್ದು ಅವುಗಳನ್ನು ನಿಯಂತ್ರಿಸುತ್ತದೆ. ಅದರಂತೆ ಮೆದುಳಿನ ಎಡಭಾಗವು ದೇಹದ ಬಲ ಭಾಗವನ್ನು ನಿಯಂತ್ರಿಸುತ್ತದೆ. ಮೆದುಳಿನ ಈ ಎರಡೂ ಭಾಗಗಳ ಗುಣವಿಶೇಷಗಳು ಭಿನ್ನಭಿನ್ನವಾಗಿರುತ್ತವೆ. ಎಡಭಾಗದ ಗುಣ ವಿಶೇಷವೆಂದರೆ ಅದು ತರ್ಕಶುದ್ಧ(Logical) ವಾಗಿರುತ್ತದೆ. ಪರಂಪರಾಕ್ರಮವನ್ನು (Sequential) ಹೊಂದಿರುತ್ತದೆ. ವಿವೇಚನೆ (Rational) ಉಳ್ಳದ್ದಾಗಿರುತ್ತದೆ, ವಿಶ್ಲೇಷಣಾತ್ಮಕವೂ (Analytical) ಮತ್ತು ವಸ್ತುನಿಷ್ಠ ಅಂದರೆ ಬಾಹ್ಯ ವಸ್ತು ನಿಷ್ಠವೂ (Objective) ಆಗಿರುವುದಲ್ಲದೆ ಸಂಗತಿಗಳನ್ನು ಆಂಶಿಕವಾಗಿ ಅವಲೋಕಿಸುತ್ತದೆ. ಇದಕ್ಕೆ ವಿರುದ್ಧವಾಗಿ ಮೆದುಳಿನ ಬಲಭಾಗದ ಪ್ರಕ್ರಿಯೆಗಳು ಭಿನ್ನವಾಗಿರುತ್ತವೆ. ಅದು ಮನಸ್ಸಿಗೆ ತೋರಿದಂತೆ ಸ್ವೇಚ್ಛೆಯಾಗಿ (Random) ವರ್ತಿಸುತ್ತದೆ. ಅದು ಅಂತರ್ದೃಷ್ಟಿ ಅಂದರೆ ಸಹಜಜ್ಞಾನ (Intuitive) ವನ್ನು ಹೊಂದಿರುತ್ತದೆ. ಅತಾರ್ಕಿಕವೂ, ಆಯುಕ್ತಿಕವೂ, ಅಪರಿಮೇಯವೂ ಆಗಿರುತ್ತದೆ. ಇದು ಸಂಶ್ಲೇಷಣಾತ್ಮಕವೂ (Synthesizing) ಮತ್ತು ಸಂಯೋಜನಾತ್ಮಕವೂ ಆಗಿರುತ್ತದೆ. ಅಲ್ಲದೆ ವ್ಯಕ್ತಿನಿಷ್ಠ (Subjective) ವಾಗಿದ್ದು ಸಮಗ್ರ ದೃಷ್ಟಿಯನ್ನು ಹೊಂದಿರುತ್ತದೆ. ಇದನ್ನೆಲ್ಲ ಪರಿಶೀಲಿಸಿದಾಗ ಮೆದುಳಿನ ಬಲಭಾಗವು ಆಧ್ಯಾತ್ಮಿಕ

'ಸತ್ಯವಲ್ಲದೆ ಬೇರೆ ದೇವರಿಲ್ಲ ಎಂಬುದು ಅನೇಕ ಅನುಭವಗಳಿಂದ ನನಗೆ ಮನವರಿಕೆಯಾಗಿದೆ'

- ಮಹಾತ್ಮಗಾಂಧಿ





ಸಾಧನೆಗೆ ಪೂರಕವಾಗಿರುತ್ತದೆ ಎಂಬುದು ತಿಳಿದು ಬರುತ್ತದೆ. ಈ ರೀತಿ ಸಾಧನೆ ಮಾಡುವುದರಿಂದ ಬಲಭಾಗದ ಮೆದುಳಿನ ಊರ್ಜವು ಪ್ರಭಾವಿತವಾಗುತ್ತದೆ.

ಈ ರೀತಿಯಾಗಿ ಮೆದುಳಿನ ಎಡ ಮತ್ತು ಬಲ ಭಾಗಗಳ ಗುಣವಿಶೇಷಗಳನ್ನು ಪರಿಶೀಲಿಸಿದಾಗ ಇಷ್ಟಲಿಂಗವನ್ನು ಎಡಅಂಗೈಯಲ್ಲಿ ಇಟ್ಟು ಧ್ಯಾನಿಸುವುದರ ಔಚಿತ್ಯ ಸ್ಪಷ್ಟವಾಗುತ್ತದೆ. ಎಡಅಂಗೈಯು ನೇರವಾಗಿ ಮೆದುಳಿನ ಬಲಭಾಗದೊಂದಿಗೆ ಸಂಪರ್ಕ ಹೊಂದಿರುತ್ತದೆ. ಕಣ್ಣಿನ ನರಮಂಡಲದೊಂದಿಗೆ ಮೆದುಳಿನ ಸಂಪರ್ಕ ಇರುತ್ತದೆ. ಅಂಗೈಯಲ್ಲಿ ಇಷ್ಟಲಿಂಗದ ಕಂತಿಯ ಪದಾರ್ಥಗಳು ಅಂಗೈಯ ಶಾಖದಿಂದ ಸ್ಫುರಣಗೊಳ್ಳುತ್ತವೆ. ಅಗ ಅವುಗಳಿಂದ ಕೆಲವು ತರಂಗಗಳು ಹೊರಹೊಮ್ಮಿ ವಿಕೀರ್ಣಗೊಳ್ಳುತ್ತವೆ. ಕಣ್ಣಿನ ದೃಷ್ಟಿ ಇಷ್ಟಲಿಂಗದಲ್ಲಿ ನೆಟ್ಟಾಗ ಅಂದರೆ ತ್ರಾಟಕ ಮಾಡಿದಾಗ ದೃಷ್ಟಿಯು ಈ ತರಂಗಗಳೊಂದಿಗೆ ಸಂಪರ್ಕ ಹೊಂದಿ ಅದನ್ನು ಮೆದುಳಿಗೆ ಜೋಡಿಸುತ್ತದೆ. ಇಷ್ಟಲಿಂಗಕ್ಕೂ ಮತ್ತು ಮೆದುಳಿಗೂ ಜೋಡಿಸುವ ಇದು ಒಂದು ಸಂಪರ್ಕ ಮಾರ್ಗ. ಎಡ ಅಂಗೈಯು ನೇರವಾಗಿ ಮೆದುಳಿನ ಬಲಭಾಗಕ್ಕೆ ಸೇರಿರುವುದರಿಂದ ಮತ್ತು ಆ ಎಡಭಾಗದ ನಿಯಂತ್ರಣದಲ್ಲಿ ಇರುವುದರಿಂದ ಇಷ್ಟಲಿಂಗವು ಇನ್ನೊಂದು ಮಾರ್ಗವಾಗಿ ಮೆದುಳಿನ ಸಂಪರ್ಕಕ್ಕೆ ಬರುತ್ತದೆ. ಆಗ ಮೆದುಳಿನಿಂದ ಎಡ ಅಂಗೈಯ, ಎಡ ಅಂಗೈದಿಂದ ಇಷ್ಟಲಿಂಗ, ಇಷ್ಟಲಿಂಗದಿಂದ ತ್ರಾಟಕದ ಮೂಲಕ ದೃಷ್ಟಿ ಅಥವಾ ಚಕ್ಷುಶ ಇಂದ್ರಿಯ, ಚಾಕ್ಷುಷದಿಂದ ಮತ್ತೆ ಮೆದುಳಿಗೆ- ಹೀಗೆ ಒಂದು ಮಂಡಲ(Circuit) ನಿರ್ಮಾಣವಾಗುತ್ತದೆ. ಅದು ವಿದ್ಯುತ್ ಮಂಡಲದಂತೆ (Electric Circuit) ಕೆಲಸ ಮಾಡುತ್ತದೆ. ಮೊದಮೊದಲಿಗೆ ಅಲ್ಲೊಂದು ಚಿಕ್ಕದಾದ ಕಿಡಿಯಂಥ ಪ್ರಕಾಶ ಬಿಂದು ಕಾಣಬಹದು. ತ್ರಾಟಕದ ಜೊತೆಗೆ ವಿಧಿ ಬದ್ಧವಾಗಿ ಪಂಚಾಕ್ಷರಿಯ ಪಠಣ ಮಾಡುತ್ತ ಹೋದರೆ ಮೆದುಳಿನಲ್ಲಿ ಕಂಪನ ಉಂಟಾಗಿ ಒಂದು ಬಗೆಯ ನಾದ ಉತ್ಪತ್ತಿಯಾಗುತ್ತದೆ. ಅದರಿಂದ ಮೆದುಳು ಪ್ರಚೋದಿಸಲ್ಪಟ್ಟು ಪ್ರಕಾಶ ಬಿಂದುವಿನ ಊರ್ಜೆ ಯನ್ನು ಪ್ರದೀಪ್ತಗೊಳಿಸುತ್ತದೆ. ಅದು ಪ್ರದೀಪ್ತಗೊಳ್ಳುತ್ತ ಹೋದಂತೆ ಇಷ್ಟಲಿಂಗವು ದೃಷ್ಟಿಯಲ್ಲಿ ಲಯವಾಗಿ ಅದು ಸಾಕಾರದಿಂದ ನಿರಾಕಾರ ರೂಪವನ್ನು ತಾಳುತ್ತದೆ. ಸಾಧನೆಯ ಈ ಅವಸ್ಥೆಯಲ್ಲಿಯೇ .ಇಷ್ಟಲಿಂಗದ ಸಕಲತ್ವವು ಲಯವಾಗಿ ನಿಃಕಲತ್ವ ಸ್ಥಿತಿ ಉಂಟಾಗುತ್ತದೆ ಮತ್ತು ಅದು ಸಾಧಕನಿಗೆ ಗೋಚರವಾಗುತ್ತದೆ. ಈ ಸಂದರ್ಭದಲ್ಲಿ ಶ್ರೀಗುರು ಚೆನ್ನಬಸವೇಶ್ವರಸ್ವಾಮಿಗಳು ನಿರೂಪಿಸಿದ ವಸ್ತು ನಿರ್ದೇಶ ಪದಮಂತ್ರ ಗೋಪ್ಯದ ಕಥನ ಈ ಮುಂದಿನಂತಿದೆ

*ಆಕಾರ ನಿರಾಕಾರವೇಕವೆಂದೇ ನೋಡಿ ।*  
*ಆಕಾರವಿಡಿದು ಅರ್ಚನೆ ಪೂಜನೆ ॥*  
*ಏಕೋಭಾವದ ನೈಷ್ಠೆ ನಿರ್ವಾಣದಿ ನಿಲಲು ನಿ ।*  
*ರ್ನಾಕಾರ ನಿರಾಕಾರ ತಾನು ತಾನೆ ॥ ೧ ॥*

(ಪದಮಂತ್ರ ಗೋಪ್ಯ- ಹಳಕಟ್ಟಿ ಸಂಪುಟ ೯, ಪು. ೩)

ಬಸವಣ್ಣನವರು ಆವಿಷ್ಕರಿಸಿದ ಇಷ್ಟಲಿಂಗವು ಈ ರೀತಿಯಾಗಿ ವೈಜ್ಞಾನಿಕ ಹಿನ್ನಲೆ ಹೊಂದಿರುವುದರಿಂದ ಅದು ನಾವು ಅಂದುಕೊಂಡಂಥ 'ಶಿಶ್ನದೇವ'ದ ಪ್ರತೀಕವಾದ ಶಿವಲಿಂಗವಲ್ಲ ಎಂಬುದು ತಿಳಿದು ಬರುತ್ತದೆ. ಇಲ್ಲಿ ವಿವರಿಸಿರುವ ಸ್ವರೂಪದ ಇಷ್ಟಲಿಂಗದ ಉಲ್ಲೇಖ ಬಸವಣ್ಣನವರ ಪೂರ್ವದಲ್ಲಿ ಯಾವುದೇ ಸಂಸ್ಕೃತ ಸಾಹಿತ್ಯದಲ್ಲಾಗಲೀ, ಯೋಗ ಸಾಧನೆಗಳಲ್ಲಾಗಲೀ ಅಥವಾ 'ಇಷ್ಟಲಿಂಗ ಮತ್ತು ಶಿವಲಿಂಗ ಒಂದೇ' ಎಂದು ತರ್ಕಿಸುವವರ ವಾದಗಳಲ್ಲಾಗಲೀ ನಮಗೆ ಕಂಡು ಬರುವುದಿಲ್ಲ. ಹೀಗಾಗಿ ಬಸವಣ್ಣನವರು ಆವಿಷ್ಕರಿಸಿ ಸಾಧನೆಗೆ ಅಳವಡಿಸಿರುವ ಇಷ್ಟಲಿಂಗದ ಸಂಕಲ್ಪನೆಯೂ ತೀರ ವಿನೂತನವಾಗಿದೆ, ವೈಜ್ಞಾನಿಕವಾಗಿದೆ. ಇದರ ಪದಾಂತ್ಯದಲ್ಲಿ 'ಲಿಂಗ' ಎಂಬುದು ಸೇರಿರುವುದರಿಂದ ಇದು ಶಿವಲಿಂಗದ ಪರ್ಯಾಯವಾಗಲೀ, ಪ್ರತೀಕವಾಗಲೀ, ಸಮಾನವಾಗಲೀ, ಸಮಾರ್ಥಿಯಾಗಲೀ ಆಗಲಾರದು.



'ದೇವರು ಎನ್ನುವುದು ಪರಮಾತ್ಮನಿಗೆ ಭಾವನಾತ್ಮಕ ಹೆಸರಾದರೆ, ಸತ್ಯ ಎನ್ನುವುದು ವೈಜ್ಞಾನಿಕ ಹೆಸರು'

-ಪೂಜ್ಯ ಶ್ರೀ ಸಿದ್ಧೇಶ್ವರಸ್ವಾಮಿಗಳು

# ನೀರಿನ ಕುಯಿಲು ಅಥವಾ ಮಳೆನೀರಿನ ಸಂಗ್ರಹಣೆ ಮತ್ತು ಸದ್ಬಳಕೆ (Rain Water Harvesting)

-ಬಿ.ನಂ. ಚನ್ನಪ್ಪ *

ನೀರು ಮನುಷ್ಯನಿಗೆ ಬೇಕಾದ ಐದು ಮೂಲಭೂತ ಅವಶ್ಯಕತೆಗಳಲ್ಲಿ ಪ್ರಮುಖವಾದುದು. ಅದಕ್ಕಾಗಿಯೇ ಅದನ್ನು 'ಜೀವಜಲ' ಎಂದು ಕರೆಯಲಾಗುತ್ತದೆ. ನೀರಿಲ್ಲದೆ ಮನುಷ್ಯ ಬದುಕಲಾರ. ಮನುಷ್ಯನೇ ಏಕೆ! ಸಕಲಜೀವರಾಶಿಗಳಿಗೆ, ಸಸ್ಯಸಂಪತ್ತಿಗೆ ಹಾಗೂ ಈ ಪ್ರಕೃತಿಯ ಅಸ್ತಿತ್ವಕ್ಕೆ ನೀರೇ ಆಧಾರ ಹಾಗಾಗಿ ನೀರು ಅಮೂಲ್ಯವಷ್ಟೇ ಅಲ್ಲ, ಅನಿವಾಯವೂ ಹೌದು. ಈ ವಿಶ್ವದ ಅಳಿವು, ಉಳಿವಿಗೆ ಕಾರಣವಾಗಿರುವ ನೀರಿನ ಉಪಯೋಗ ಮತ್ತು ಬಳಕೆಯ ಬಗ್ಗೆ ಮಾನವನ ತಿಳುವಳಿಕೆ ಕಡಿಮೆಯೆಂದರೆ ತಪ್ಪಾಗಲಾರದು, ಅಥವಾ ಅದರ ಬಗ್ಗೆ ಅನಾಸಕ್ತಿ ಇರಬಹುದು. ಇಂತಹ ಮನೀಭಾವ ಭವಿಷ್ಯದ ದೃಷ್ಟಿಯಿಂದ ಅಕ್ಷಮ್ಯವಾದುದು. ಇದುವರೆಗೆ ನೀರಿನ ಕೊರತೆ ಒಂದು ತೀವ್ರ ಸಮಸ್ಯೆಯಾಗಿರಲಿಲ್ಲ. ಆದರೆ ಇಂದಿನ ಪರಿಸ್ಥಿತಿ ಬದಲಾಗಿದೆ. ಸುಮಾರು ೪೦% ಜನಗಳಿಗೆ ಒಳ್ಳೆಯ ನೀರು ಲಭ್ಯವಿಲ್ಲ. ಇದು ಸಮಸ್ಯೆಯನ್ನು ಜಟಿಲಗೊಳಿಸಿದೆ. ನೀರಿನ ಬಗ್ಗೆ ಅರಿವು ಇಂದು ಪ್ರತಿಯೊಬ್ಬರಿಗೂ ಬೇಕಾಗಿದೆ. ಅಂದರೆ ನಮಗೆ ಲಭ್ಯವಿರುವ ನೀರಿನ ಪ್ರಮಾಣ ಹಾಗೂ ನಾವು ಉಪಯೋಗಿಸುತ್ತಿರುವ ಪ್ರಮಾಣ ಎರಡನ್ನೂ ಸರಿದೂಗಿಸುವ ಬಗ್ಗೆ ತಿಳುವಳಿಕೆ ಅತಿ ಅವಶ್ಯಕ.

### ೧. ನೀರಿನ ಲಭ್ಯತೆ :

ನಾವು ವಾಸಿಸುವ ಈ ಭೂಮಿಯ ಒಟ್ಟು ಪ್ರದೇಶದಲ್ಲಿ ಶೇ. ೭೦ ರಷ್ಟು ನೀರಿನಿಂದ ಆವೃತವಾಗಿದೆ. ಉಳಿದ ಶೇ. ೩೦ ರಷ್ಟು ಭೂಭಾಗವಿದೆ. ಭೂಮಿಯಲ್ಲಿರುವ ಒಟ್ಟು ನೀರಿನಲ್ಲಿ ಬಳಗೆಗೆ ಯೋಗ್ಯವಾದುದು ಶೇ. ೨೧/೨ಯಷ್ಟು ಮಾತ್ರ, ಉಳಿದದ್ದು ಉಪ್ಪಿನಿಂದ ಕೂಡಿದ ಸಮುದ್ರ ಹಾಗೂ ಸಾಗರಗಳಲ್ಲಿ ಸೇರಿ ಹೋಗಿದೆ. ಬಳಕೆಗೆ ಯೋಗ್ಯವಾದ ನೀರಿನಲ್ಲಿ ಶೇ. ೨೦ ರಷ್ಟು ಮಾತ್ರ ನಾವು ಉಪಯೋಗಿಸಬಹುದಾಗಿದೆ. ಅಂದರೆ ಒಟ್ಟು ನೀರಿನಲ್ಲಿ ನಮ್ಮ ಬಳಕೆಗೆ ಲಭ್ಯವಿರುವ ನೀರಿನ ಪ್ರಮಾಣ ಶೇ. ೦.೫೦ ರಿಂದ ೦.೬೦ ರಷ್ಟು ಮಾತ್ರ(ಶೇ. ೧ಕ್ಕಿಂತ ಕಡಿಮೆ) ಇಂತಹ ಅಮೂಲ್ಯವಾದ ನೀರನ್ನು ಹೇಗೆ ಬಳಕೆ ಮಾಡಬೇಕೆಂಬ ಅರಿವು ಪ್ರತಿಯೊಬ್ಬರಿಗೂ ಆಗಬೇಕಾಗಿದೆ. ಇಂತಹ ಅರಿವು ಮೂಡಿಸಲು, ೨೦೦೩ನೇ ವರ್ಷವನ್ನು ಅಂತರರಾಷ್ಟ್ರೀಯ ಜಲವರ್ಷವನ್ನಾಗಿ ಆಚರಿಸಲಾಗುತ್ತಿದೆ.

### ೨. ನೀರಿನ ಕೊರತೆ ಹಾಗೂ ಸಮಸ್ಯೆಗಳು :

ನೀರಿನ ಕೊರತೆಗೆ ಕಾರಣಗಳು ಹಲವಾರು. ಅವುಗಳಲ್ಲಿ ಅತಿಮುಖ್ಯವಾದವುಗಳೆಂದರೆ ಅತಿವೇಗದಲ್ಲಿ ಬೆಳೆಯುತ್ತಿರುವ ಜನಸಂಖ್ಯೆ, ಕಾಡುಗಳ ಅಂದರೆ ಸಸ್ಯಸಂಪತ್ತಿನ ನಾಶ, ನೀರಿನ ಅತಿಯಾದ ಬಳಕೆ, ಭೂಮಿಯ ಸವಕಲು(Erosion of Soil), ನಗರೀಕರಣ ಮತ್ತು ಪರಿಸರದ ಮೇಲೆ ಮಾನವನ ಸ್ವಾರ್ಥದಿಂದ ಆಗುತ್ತಿರುವ ಅತ್ಯಾಚಾರ ಅಂದರೆ ಗಣಿಗಾರಿಕೆ, ಭಾರಿ ನೀರಾವರಿ ಯೋಜನೆಗಳ ನಿರ್ಮಾಣ, ಕಾಡುಗಳು ಹಾಗೂ ಅಲ್ಲಿನ ಜೀವಸಂಕುಲದ ನಾಶ, ನಗರಗಳ ಬೆಳವಣಿಗೆ, ಆಧುನಿಕ ಯಂತ್ರಗಳಿಂದ ಅಂತರ್ಜಲದ ದುರ್ಬಳಕೆ ಇತ್ಯಾದಿ. ಒಂದು ಸಮೀಕ್ಷೆಯ ಪ್ರಕಾರ ಪ್ರತಿವರ್ಷ ೯೦,೦೦೦ ಚ.ಕಿ.ಮಿ ಪ್ರದೇಶದಲ್ಲಿ ಕಾಡಿನ ಮತ್ತು ಅಲ್ಲಿನ ವನ್ಯಜೀವಿಗಳ ನಾಶವಾಗುತ್ತಿದೆ. ಇದುವರೆಗೆ ನಮಗೆ ತಿಳಿದಿದ್ದ ೮೦೦ ಜೀವಸಂಕುಲದ ನಾಶವಾಗಿದೆಯೆಂದು ಹೇಳಲಾಗುತ್ತಿದೆ. ನಾವು ಸಕಾಲದಲ್ಲಿ ಎಚ್ಚೆತ್ತುಕೊಳ್ಳದಿದ್ದರೆ ಇಡೀ ವಿಶ್ವದಲ್ಲಿ ಭೀಕರ ಜಲಕ್ಷಾಮದಿಂದ ಸಕಲಜೀವರಾಶಿಗಳು, ಸಸ್ಯಸಂಪತ್ತು ಹಾಗೂ ಪರಿಸರ ನಾಶವಾಗಿ ದೊಡ್ಡ ದುರಂತವನ್ನು ಎದುರಿಸಬೇಕಾಗುತ್ತದೆ. ೨೦೨೫ರ ವೇಳೆಗೆ ವಿಶ್ವದ ಅನೇಕ ರಾಷ್ಟ್ರಗಳು ಅಂದರೆ ೨/೩ ರಷ್ಟು ಜನರು ಭೀಕರ ಜಲಕ್ಷಾಮದಿಂದ ನರಳಬೇಕಾಗುತ್ತದೆ ಎಂಬುದು ಪರಿಸರ ತಜ್ಞರು, ಭೂವಿಜ್ಞಾನಿಗಳು ಮತ್ತು ಇಂಜಿನಿಯರುಗಳ ಅಭಿಪ್ರಾಯವಾಗಿದೆ. ಆದ್ದರಿಂದ ನೀರಿನ ಮಿತ ಬಳಕೆ ಹಾಗೂ ಸಂರಕ್ಷಣೆ ಪ್ರತಿಯೊಬ್ಬ ನಾಗರಿಕನ ಕರ್ತವ್ಯವಾಗಿದೆ.

### ೩. ಜಲಮಾಲಿನ್ಯ :

ನೀರಿನ ಕೊರತೆಗೆ ಜಲಮಾಲಿನ್ಯವೂ ಒಂದು ಮುಖ್ಯ ಕಾರಣವಾಗಿದೆ. ಅತಿಯಾದ ನಗರೀಕರಣದಿಂದ (Urbanisation) ನಗರಗಳಲ್ಲಿ ವಾಸಿಸುವ ಜನರಿಂದ ಮತ್ತು ಅನೇಕ ಕೈಗಾರಿಕೆಗಳಿಂದ ಉಪಯೋಗಿಸಿದ ಕಲುಷಿತ ನೀರು ಹಳ್ಳಗಳು, ನದಿ, ಕೆರೆಗುಂಟೆಗಳು, ಸರೋವರಗಳನ್ನು ಸೇರಿ ಮಲಿನಗೊಂಡು ಅನೇಕ ಸಮಸ್ಯೆಗಳನ್ನು ಸೃಷ್ಟಿಸಿದೆ. ದಿನೇ ದಿನೇ ಬೃಹದಾಕಾರವಾಗಿ ಬೆಳೆಯುತ್ತಿರುವ ಈ ಸಮಸ್ಯೆಯಿಂದ ಜಲಚರಗಳ, ಪ್ರಾಣಿಪಕ್ಷಿಗಳು, ಬದುಕು ದುಸ್ಸಹವಾಗಿ ಪರಿಸರ ನಾಶವಾಗುತ್ತಿದೆ. ಏಷ್ಯಾಖಂಡದ ಒಂದು ದಶಲಕ್ಷ ಜನಸಂಖ್ಯೆಗಿಂತ ಹೆಚ್ಚಿಸುವ ನಗರಗಳಲ್ಲಿ ಜಲಮಾಲಿನ್ಯದಿಂದ ಸುಮಾರು ೧೫ ಲಕ್ಷ ಜನ ಪ್ರತಿವರ್ಷ ಸಾವನ್ನಪ್ಪುತ್ತಿದ್ದಾರೆ ಎಂದು ತಿಳಿದು ಬಂದಿದೆ. ಒಂದು ಅಂದಾಜಿನ ಪ್ರಕಾರ ವಿಶ್ವದ ಶೇ. ೪೦ ರಷ್ಟು ಜನರಿಗೆ ಒಳ್ಳೆಯ ನೀರು ಸಿಗುತ್ತಿಲ್ಲ. ಇದರ ಜೊತೆಗೆ ನೆಲ ಮತ್ತು ವಾಯುಮಾಲಿನ್ಯವೂ ಸೇರಿ ಇಡೀ ವಾತಾವರಣ ಕ್ರಮೇಣ ಕಲುಷಿತಗೊಳ್ಳುತ್ತಿದೆ. ವಾಯು ಮಾಲಿನ್ಯದಲ್ಲಿ ಬಹುಮಟ್ಟಿಗೆ ಅಮೆರಿಕಾದಂತಹ ಮುಂದುವರಿದ ರಾಷ್ಟ್ರಗಳ ಪಾಲೇ ಹೆಚ್ಚಾಗಿದೆ.

### ೪. ಪ್ರತಿವ್ಯಕ್ತಿಗೆ ಬೇಕಾದ ನೀರಿನ ಪ್ರಮಾಣ :

ವಿಶ್ವ ಆರೋಗ್ಯ ಸಂಸ್ಥೆಯ ಪ್ರಕಾರ ಪ್ರತಿ ವ್ಯಕ್ತಿಯ ನೀರಿನ ಅವಶ್ಯಕತೆಯ ಪ್ರಮಾಣ ಪ್ರತಿದಿನ ೧೩೫ರಿಂದ ೧೪೦ ಲೀಟರ್‌ಗಳು ಇದರಲ್ಲಿ ಶೇ. ೨೦ರಷ್ಟು ಕುಡಿಯಲು ಹಾಗೂ ಅಡಿಗೆ ಮುಂತಾದ ಅವಶ್ಯಕತೆಗಳಿಗೆ ಉಪಯೋಗವಾಗುತ್ತದೆ. ಶೇ. ೬೦ ರಷ್ಟು ಸ್ನಾನ ಶೌಚಾಲಯ ಹಾಗೂ ಬಟ್ಟೆ ಶುದ್ಧಿ ಮಾಡಲು ಉಪಗೋಗಿಸಲ್ಪಡುತ್ತದೆ. ಉಳಿದ ಶೇ.೨೦ ರಷ್ಟು ತೋಟಗಾರಿಕೆ, ಮನೆಯ ಹಾಗೂ ಆವರಣದ ಸ್ವಚ್ಛತೆ, ವಾಹನಗಳನ್ನು ತೊಳೆಯುವುದು ಇತ್ಯಾದಿ ಗಾಗಿ ಬಳಕೆಯಾಗುತ್ತದೆ. ನಾಗರಿಕರಿಗೆ ಶುದ್ಧನೀರನ್ನು ಒದಗಿಸುವುದು ಅದರ ಲಭ್ಯತೆ, ಅದರ ಮೂಲ ಮತ್ತು ಅದರ ದೂರವನ್ನು ಅವಲಂಬಿಸಿರುವುದರಿಂದ ಅದೊಂದು ಭಗೀರಥ ಪ್ರಯತ್ನವಾಗಿ ಪರಿಣಮಿಸಿದೆ. ಶುದ್ಧೀಕರಿಸಿದ ನೀರನ್ನು ವಿವೇಚನೆಯಿಂದ ಬಳಸುವುದು ಎಲ್ಲರಿಗೂ ತಿಳಿಯಬೇಕು.

### ೫. ಮಳೆಯ ನೀರು ಅದರ ಸಂರಕ್ಷಣೆ ಮತ್ತು ಶೇಖರಣೆ :

ನೀರಿಗೆ ಬದಲಾಗಿ ಪರ್ಯಾಯ ವಸ್ತುವಿಲ್ಲ. ಅದು ಪ್ರಕೃತಿ ನೀಡಿರುವ ಅಮೂಲ್ಯ ಕೊಡುಗೆ. ಅದೃಷ್ಟದಿಂದ ನೀರು ಪುನರಾವರ್ತನೆಯಾಗುವ ಮೂಲವಾಗಿದೆ. (Renewable resource)ಈಗಾಗಲೇ ತಿಳಿಸಿದಂತೆ ಅದರ ಸಂರಕ್ಷಣೆ ಹಾಗೂ ಸದ್ಬಳಕೆ ಪ್ರತಿಯೊಬ್ಬರ ಜೀವನ ವಿಧಾನ ಬೇಕು. ನೀರು ದೊರಕುವುದು ಮಳೆಯ ಮೂಲಕ ಮಾತ್ರ. ಬಿದ್ದ ಮಳೆಯ ನೀರು ಹರಿದುಹೋಗಿ ಸಮುದ್ರ ಸೇರುವ ಮುನ್ನ ಅದನ್ನು ತಡೆದು ಭೂಮಿಗೆ ಸೇರುವಂತೆ ಮಾಡುವುದು ಅಥವಾ ಬೇರೆ ಬೇರೆ ಮಾರ್ಗೋಪಾಯಗಳಿಂದ ಹಿಡಿದಿಟ್ಟುಕೊಳ್ಳುವುದು ಬಹಳ ಮುಖ್ಯ. ಇದನ್ನೇ ಮಳೆ ನೀರಿನ ಕುಯಿಲು ಅಥವಾ ಮಳೆನೀರಿನ ಶೇಖರಣೆ ಮತ್ತು ಸಂರಕ್ಷಣೆ (Rain water harvesting) ಎಂದು ಕರೆಯುತ್ತಾರೆ. ಮಳೆಯಿಂದ ಬಿದ್ದ ನೀರು ಪೋಲಾಗದಂತೆ ತಡೆದು ಶೇಖರಿಸಲು ಅನೇಕ ವಿಧಾನಗಳನ್ನು ನಮ್ಮ ಪೂರ್ವಿಕರು ಹಿಂದಿನಿಂದಲೂ ಅನುಸರಿಸಿಕೊಂಡು ಬಂದಿದ್ದಾರೆ. ಇದಕ್ಕೆ ಉದಾಹರಣೆಯಾಗಿ ಹಳ್ಳಿಗಾಡಿನ ಪ್ರದೇಶದಲ್ಲಿ ಇಂದಿಗೂ ಇರುವ ಕೆರೆಗಳು, ಕುಂಟೆಗಳು, ಕಲ್ಯಾಣಿಗಳು, ಒಡ್ಡುಗಳು, ಅಣೆಕಟ್ಟುಗಳು ಮತ್ತು ಜಲಾಶಯಗಳನ್ನು ನೋಡಬಹುದು. ಕರ್ನಾಟಕದಲ್ಲಿ ಸುಮಾರು ೪೦,೦೦೦ ಕೆರೆಗಳಿವೆ ಎಂಬುದು ಎಲ್ಲರಿಗೂ ಗೊತ್ತಿರುವ ವಿಚಾರ. ಕೆರೆಗಳು ಪ್ರತಿಹಳ್ಳಿಯ ಜೀವನಾಡಿ ಎಂಬುದು ನಿರ್ವಿವಾದ. ಅದೇ ರೀತಿ ಬೇರೆ ಬೇರೆ ರಾಜ್ಯಗಳಲ್ಲಿ ವಿವಿಧ ರೀತಿಯ ಶೇಖರಣಾ ವಿಧಾನ

* ನಿವೃತ್ತ ಮುಖ್ಯ ಇಂಜಿನಿಯರ್, ನಂ. ೧೧೧೫, ೧೧ನೇ ಮುಖ್ಯರಸ್ತೆ, ಪಶ್ಚಿಮ ಕಾರ್ಡ್ ರಸ್ತೆ, ೨ನೇ ಹಂತ, ಬೆಂಗಳೂರು-೮೬.

ಮೂಲವೇದಗಳಲ್ಲಿ ಎಲ್ಲಿಯೂ ಜಾತಿಭೇದವು ಕಂಡು ಬರುವುದಿಲ್ಲ -ವ್ಯಾಕರಣತೀರ್ಥ ಶ್ರೀಚಂದ್ರಶೇಖರಶಾಸ್ತ್ರಿಗಳು

'ಶೂನ್ಯ ಸಂಪಾದನೆ ಸಾಂಪ್ರದಾಯಿಕ ರಚನೆಗಳಿಂದ ತೀರಾ ಭಿನ್ನವಾದುದು' -ಡಾ|| ಸಾ.ಶಿ. ಮರುಳಯ್ಯ

ಗಳನ್ನು ನೋಡಬಹುದು. ಅಂತಹ ನೀರಿನ ಶೇಖರಣಾ ವಿಧಾನಗಳನ್ನು ನೋಡಬಹುದು. ಅಂತಹ, ನೀರಿನ ಕೆಲವು ಆಸರೆಗಳು ಜನ ಸಂಖ್ಯಾ ಸ್ಫೋಟದಿಂದ ಅಂದರೆ ನಗರೀಕರಣದಿಂದ ಕಾಣೆಯಾಗುತ್ತಿದೆ. ಇನ್ನುಳಿದವು ಹೂಳು ತುಂಬಿ ಶೇಖರಣೆ ಪ್ರಮಾಣ ಕಡಿಮೆಯಾಗಿ ನೀರಿನ ಕೊರತೆಗೆ ಕಾರಣವಾಗಿದೆ.

ಸಾಮಾನ್ಯವಾಗಿ ಮಳೆನೀರಿನ ಸಂಗ್ರಹಣೆ ಮತ್ತು ಬಳಕೆಯನ್ನು ಪ್ರಮುಖವಾಗಿ ಎರಡು ಭಾಗವಾಗಿ ವಿಭಾಗಿಸ ಬಹುದು. ಒಂದು ಹಳ್ಳಿಗಾಡಿನ ಪ್ರದೇಶದಲ್ಲಿ ಮತ್ತು ಎರಡನೆಯದು ನಗರ ಪ್ರದೇಶದಲ್ಲಿ. ಹಳ್ಳಿಗಾಡಿನ ಪ್ರದೇಶದಲ್ಲಿ ಮುಖ್ಯವಾಗಿ ನೀರಾವರಿಗಾಗಿ, ಖುಷ್ಕಿ ಬೆಳೆಗಾಗಿ, ದನಕರು ಗಳು ಹಾಗೂ ಮೀನುಗಾರಿಕೆಗಾಗಿ, ಮನೆಯ ಬಳಕೆಗಾಗಿ, ತೋಟಗಾರಿಕೆ ಮತ್ತು ಅಂತರ್ಜಲ ವರ್ಧನೆಗಾಗಿ ಉಪ ಯೋಗಿಸಬಹುದಾಗಿದೆ. ನಗರ ಪ್ರದೇಶದಲ್ಲಿ ಪ್ರಮುಖವಾಗಿ ಕುಡಿಯುವುದು, ಮನೆಯ ಇತರ ಉಪಯೋಗ, ತೋಟ ಗಾರಿಕೆ ಮತ್ತು ಅಂಜರ್ಜಲ ವೃದ್ಧಿಗಾಗಿ ಉಪಯೋಗಿಸ ಬಹುದು.

ನಾವು ಈಗ ನಗರ ಪ್ರದೇಶದಲ್ಲಿ ಮಳೆ ನೀರು ಶೇಖರಣೆ ಮತ್ತು ಸಂಗ್ರಹಣೆ ಮತ್ತು ಬಳಕೆ ಬಗ್ಗೆ ಗಮನ ಹರಿಸೋಣ.

ನಗರ ಪ್ರದೇಶದಲ್ಲಿ ಬಯಲು ಪ್ರದೇಶವು ಕಡಿಮೆ ಯಿರುತ್ತದೆ. ಕಟ್ಟಡಗಳನ್ನು ಬಿಟ್ಟರೆ, ರಸ್ತೆಗಳು, ಚರಂಡಿಗಳು, ಪಾದಚಾರಿರಸ್ತೆಗಳು, ನಿವೇಶನದ ಉಳಿದ ಭಾಗ, ಸಾರ್ವ ಜನಿಕ ಉಪಯೋಗಕ್ಕೆ ಬಿಟ್ಟಿರುವ ನಿವೇಶನಗಳನ್ನು ಬಯಲು ಪ್ರದೇಶವೆಂದು(Open spaces) ಪರಿಗಣಿಸ ಬಹುದು. ಇದರಲ್ಲಿ ಬಹುಭಾಗ ಕಾಂಕ್ರೀಟ್ ಹಾಕಿರುವ ಜಾಗ, ನೆಲ ಹಾಸುಗಳಿಂದಾವೃತವಾದ ಪಾದಚಾರಿ ರಸ್ತೆ ಗಳಿಂದ(Paved foot paths etc) ನೀರು ಭೂಮಿಗೆ ಇಂಗಿಹೋಗಲು ಅವಕಾಶವಿರುವುದಿಲ್ಲ. ನಿವೇಶನದ ಉಳಿದ ಭಾಗವನ್ನು ಕೂಡ ಕಾಂಕ್ರೀಟಿನಿಂದಲೋ ಅಥವಾ ನೆಲ ಹಾಸುವಿನಿಂದಲೂ (Pavement Tiles) ಮುಚ್ಚಿರುವುದ ರಿಂದ ಮಳೆನೀರು ಸರಾಗವಾಗಿ ಚರಂಡಿ ಸೇರಿ ಹರಿದು ಹೋಗುತ್ತದೆ. ಆದ್ದರಿಂದ ಕಟ್ಟಡದ ಛಾವಣಿಯ ಮೇಲೆ ಬಿದ್ದ ಮಳೆ ನೀರನ್ನು ಸಂಗ್ರಹಿಸಿಟ್ಟುಕೊಂಡು ಉಪಯೋಗಿ ಸುವ ವಿಧಾನವು ಈಗ ರೂಢಿಗೆ ಬರುತ್ತಿದೆ. ಇದನ್ನು 'ಮಳೆನೀರಿನ ಕುಯಿಲು ಅಥವಾ ಮಳೆನೀರಿನ ಶೇಖರಣೆ ಹಾಗೂ ಸಂಗ್ರಹಣೆ' (Rain water harvesting) ಎಂದು ಕರೆಯಲಾಗುತ್ತದೆ. ಮಳೆ ನೀರನ್ನು ಅದು ಬಿದ್ದ ಜಾಗ ದಿಂದಲೇ ಬಳಕೆ ಮಾಡುವುದು ಅತ್ಯಂತ ಉತ್ತಮ ವಿಧಾನ. (Catch rain water where it falls) ನಗರಗಳಲ್ಲಿ ಸಾಂಪ್ರದಾಯಿಕವಾಗಿ, ಕೆರೆಗಳು, ಸರೋವರಗಳು, ಕಲ್ಯಾಣಿ ಗಳು ಮುಖಾಂತರ ನೀರಿನ ಸಂಗ್ರಹಣೆಯಾಗುತ್ತಿತ್ತು. ನಗರ ಬೆಳೆದಂತೆ ಬಯಲು ಪ್ರದೇಶಗಳು (Open spaces) ಕಾಣೆಯಾಗಿ ಇಡೀ ನಗರ ಕಾಂಕ್ರೀಟಿನ ಕಾನನವಾಗುತ್ತಿದೆ. ಮಳೆನೀರು ಹರಿದು ಹೋಗಿ, ಅಂತರ್ಜಲ ಮಟ್ಟ ನಮ್ಮ ನಿರೀಕ್ಷೆಗೂ ಮೀರಿ ಕುಸಿಯುತ್ತಿದೆ. ಪ್ರತಿವರ್ಷವೂ ಒಂದು ಮೀಟರ್‌ನಷ್ಟು ಕುಸಿತವಾಗುತ್ತಿದೆ. ಮಳೆನೀರು ಭೂಮಿಗೆ ಇಳಿದು ಅಂತರ್ಜಲ ವೃದ್ಧಿಯಾಗುವಂತೆ ಮಾಡುವುದು ಸರ್ಕಾರದ ಹಾಗೂ ಪ್ರತಿ ನಾಗರಿಕನ ಆದ್ಯ ಕರ್ತವ್ಯವಾಗಿದೆ. ಅದರಂತೆ ನಗರ ಪ್ರದೇಶದಲ್ಲಿ ಕಟ್ಟಡಗಳ ಛಾವಣಿ ನೀರನ್ನು ಸಂಗ್ರಹಿಸಿ ಬಳಕೆ ಮಾಡುವುದು ಅತಿ ಅವಶ್ಯಕವಾಗಿದೆ.

-ಮುಂದುವರಿಯುತ್ತದೆ.

ಮಾಡಬಾರದ ನೇಮವ ಮಾಡಿ ಕೆಡದಿರಾ, ಮನವೆ
ಮಾಡುವ ನೇಮ, ಮಾಡಬಾರದ ನೇಮಂಗಳವು
ಭೂತ ಭವಿಷ್ಯ ವರ್ತಮಾನಂಗಳವು
ಮಾಡುವ ನೇಮಂಗಳು
ನಿತ್ಯ ಲಿಂಗಾರ್ಚನೆ ಜಂಗಮದಾಸೋಹವೆಂದು
ಕಪಿಲಸಿದ್ಧಮಲ್ಲಿಕಾರ್ಜುನನ ವಚನ, ಮನವೆ.

-ಸಿದ್ಧರಾಮೇಶ್ವರ

'ಮಾತಿನ ಮೂಲಕ ಭಾವಜ್ಯೋತಿಯನ್ನು ಹೊತ್ತಿಸಿ ಜ್ಞಾನದ ಬೆಳಕನ್ನು ಬೀರುವ ವಚನ ಸಾಹಿತ್ಯದ ಭಾಷೆ ಅನನ್ಯವೂ ಅದ್ಭುತವೂ ಆಗಿದೆ' -ಡಾ|| ಸಂಗಮೇಶ ಸವದತ್ತಿಮಠ





# ಸಕಲಾತೀತ ನಮ್ಮ ಕೂಡಲಸಂಗಮದೇವ

-ಕೋ.ರಂ. ಬಸವರಾಜು *

*'ವೇದಾತೀತ*
*ಷಡುವರ್ಣರಹಿತ (ಅತೀತ)*
*ಅಷ್ಟತ್ರಿಂಶತ್ಕಲಾತೀತ*
*ವ್ಯೋಮಾತೀತ*
*ನಮ್ಮ ಕೂಡಲಸಂಗಮದೇವಾ*

*(ಬ.ಷ.ವ. ೯೫೩)*

ಮಹಾನ್ ದಾರ್ಶನಿಕರಾದ ಬಸವಣ್ಣನವರು ವೇದೋಪನಿಷದಾಗಮಗಳನ್ನು ತಲಸ್ಪರ್ಶಿಯಾಗಿ ಅಧ್ಯಯನ ಮಾಡಿದ್ದರೆಂಬುದಕ್ಕೆ ಈ ವಚನ ಸಾಕ್ಷಿಯಾಗಿದೆ. ಅವರು ಈ ವಚನದಲ್ಲಿ ಕೂಡಲಸಂಗಮದೇವನ ಅರ್ಥಾತ್ ಪರಶಿವನ ನಿರಾಕಾರ ಸ್ವರೂಪವನ್ನು ನಿರೂಪಿಸಿದ್ದಾರೆ. ಆ ಸ್ವರೂಪ ಲಕ್ಷಣೆಯ ಪ್ರತಿಪಾದನೆಗಾಗಿ ನಾಲ್ಕು ಪ್ರಮಾಣಗಳನ್ನು ಇಲ್ಲಿ ಕೊಟ್ಟಿರುತ್ತಾರೆ. ಪ್ರಥಮತಃ ಗಮನೀಯಾಂಶವೆಂದರೆ, ಪ್ರತಿಯೊಂದು ಪ್ರಮಾಣವಾಕ್ಯದ ಕೊನೆಯಲ್ಲಿ ಬರುವ 'ಅತೀತ' ಶಬ್ದ. ಇದು ಎರಡು ವಿಧ ಅರ್ಥವನ್ನು ಗರ್ಭೀಕರಿಸಿ ಕೊಂಡಿದೆ. ಮೊದಲನೆಯದಾಗಿ **'ಸರ್ವಂ ಅತ್ಯ ತಿಷ್ಠತಿ'** ಎಂಬಂತೆ ಎಲ್ಲವನ್ನು ಮೀರಿ ನಿಂತುದು, ಯಾವುದಕ್ಕೂ ನಿಲುಕದ್ದು ಅಥವಾ 'ಅತ್ತತ್ತ' ಎಂಬರ್ಥವಿದೆ. ಎರಡನೆಯ ದಾಗಿ **'ಸರ್ವಂ ಆವೃತ್ಯ ತಿಷ್ಠತಿ'** ಎಲ್ಲವನ್ನೂ ಆವರಿಸಿರುವುದು, ಎಲ್ಲದರ ಒಳ ಹೊರಗೂ ತುಂಬಿರುವುದು ಎಂಬುದು.

## ೧. ವೇದಾತೀತ :

'ವೇದ ವೇದಿಸಲರಿಯದೆ ಅಭೇದ್ಯಲಿಂಗವೆಂದು ನಡು ನಡುಗಿತ್ತು. ವೇದಗಳು ಶಬ್ದರೂಪದ್ರವ್ಯಗಳಾದ್ದರಿಂದ ಸಗುಣ ವಸ್ತುವನ್ನು ವರ್ಣಿಸಬಲ್ಲವೇ ಹೊರತು ನಿರ್ಗುಣ ವಸ್ತುವನಲ್ಲ. ಕೂಡಲಸಂಗ ಅಥವಾ ಪರಶಿವನಾದರೋ ನಿರ್ಗುಣ ನಿರಾಕಾರ ನಿರವಯ ನಿಶ್ಶೂನ್ಯ ಅಗಮ್ಯ ಅಗೋಚರ ಅಪ್ರಮೇಯ. ಈ ಕಾರಣ ವೇದಗಳು ವೇದಿಸ ಲರಿಯವು. ಕಠೋಪನಿಷತ್ತು-**'ಅಶಬ್ದಮಸ್ಪರ್ಶಮರೂಪಮ ವ್ಯಯಂ'** ಶಬ್ದ ಸ್ಪರ್ಶ ರೂಪ ಹಾಗೂ ವಿಕಾರ ರಹಿತ ವಾದುದೇ ಪರಂ ಬ್ರಹ್ಮ- ಎಂದು ಹೇಳಿದೆ. ಕೇನೋಪನಿಷತ್ತು **'ಯದ್ವಾಚಾऽನಭ್ಯುದಿತಂ, ಯೇನವಾಗಭ್ಯುದ್ಯತೇ ತದೇವ ಬ್ರಹ್ಮತ್ವಂ ವಿದ್ಧಿ'** ಯಾವುದು ಮಾತಿನಿಂದ ಹೊರಹೊಮ್ಮು ವುದಿಲ್ಲವೋ ಆದರೆ ಯಾವುದರಿಂದ ಮಾತು ಹೊರಹೊಮ್ಮು ವುದೋ ಅದೇ ಬ್ರಹ್ಮವೆಂದು ತಿಳಿ. ಇದನ್ನೇ ಮಹರ್ಷಿ ಅರವಿಂದರು 'That which remains unexpressed by the word, that by which the word is expressed, know that indeed to be Bhrahman' ಎಂದು ಸುಂದರವಾಗಿ ಅನುವಾದಿಸಿ ಹೇಳಿದ್ದಾರೆ.

ತೈತ್ತರೀಯೋಪನಿಷತ್ತು-**'ಯತೋ ವಾಚೋ ನಿವರ್ತಂತೇ ಅಪ್ರಾಪ್ಯಮನಸಾಯತ್'** ಅದು ಮಾತುಮನಂ ಗಳಿಂದತ್ತತ್ತ ಎಂದು ನಿರವಿಸಿದೆ.

ಆಗಮವೊಂದರಲ್ಲಿ

*ಅಸ್ತಿಸಚ್ಚಿತ್‌ಸುಖಾಕಾರಂ ಅಲಕ್ಷಣಪದಾಸ್ಪದಂ ।*
*ಅದ್ವಿತೀಯಂ ಅನಿರ್ದೇಶ್ಯಂಪರಂಬ್ರಹ್ಮಸನಾತನಂ॥*

ಲಕ್ಷಣ ಕಥನಕ್ಕೆ ಬಾರದ, ತೋರಬಾರದ, ಏನೇನೂ ಇಲ್ಲ ದಿರುವಾಗ ತಾನೊಬ್ಬನೇ ಯಿರುವುದೇ ಪರಂಬ್ರಹ್ಮ, ಪರ ಶಿವ ಎಂದು ಹೇಳಿದೆ.

ಮತ್ತು
ಬೃಹದಾರಣ್ಯಕೋಪನಿಷತ್ತಿನಲ್ಲಿ-

*'ಅಸ್ಯಮಹತೋ ಭೂತಸ್ಯ ನಿಶ್ವಸಿತಮೇತತ್*
*ಋಗ್ವೇದೋಯಜುರ್ವೇದಃ ಸಾಮವೇದೋ*
*ಅಥರ್ವಾಂಗಿರಸಃ'*

* 'ಮಧುಕೇಶ್ವರ ನಿಲಯ', 5ನೇ ಕ್ರಾಸ್, ಎಸ್.ಐ.ಟಿ. ಬಡಾವಣೆ, ತುಮಕೂರು.

'ಗುರುವಿನ ಗುರು ಜಂಗಮ' -ಬಸವಣ್ಣನವರು

ಪರಶಿವನ ಅನಾಯಾಸವಾಗಿ ಅಪ್ರಯತ್ನಪೂರ್ವಕವಾಗಿ ಹೊರಹೊರಟ ಉಸಿರೇ ವೇದಗಳು. ಇಂಥ ವೇದಗಳು ಅನಾದಿಯಾದ ಕೂಡಲಸಂಗನ ಪರಿಪೂರ್ಣ ಸ್ವರೂಪವನ್ನು ವರ್ಣಿಸಲರಿಯವು.

**೨. ಷಡುವರ್ಣರಹಿತ :**

ಇಲ್ಲಿ ವರ್ಣವೆಂದರೆ ಬಣ್ಣ ಮತ್ತು ಅಕ್ಷರವೆಂದರ್ಥ. ಪೀತ ಶ್ವೇತ ರಕ್ತ ಹರಿತ ಕೃಷ್ಣ ನೀಲ ಎಂಬಿವೇ ಆರು ಬಣ್ಣಗಳು. ಇವು ಪಂಚಭೂತಗಳ ಕಾಂತಿಕಾಯದ ವರ್ಣಗಳು. ಪೃಥ್ವಿಯ ಬಣ್ಣ ಪೀತ, ಅಪ್ಪುವಿನ ಬಣ್ಣ ಶ್ವೇತ, ಅಗ್ನಿಯ ಬಣ್ಣ ರಕ್ತ, ವಾಯುವಿನ ಬಣ್ಣ ಹರಿತ, ಆಕಾಶದ ಬಣ್ಣ ಕೃಷ್ಣ ಹಾಗೂ ಪ್ರಾಣದ ಬಣ್ಣ ನೀಲ. ಇಂಥ ವರ್ಣ ವಿಶಿಷ್ಟ ಪಂಚಭೂತಗಳಿಗಿಂತಲೂ ಅವುಗಳ ವರ್ಣಕ್ಕಿಂತಲೂ ಅತೀತ ನಮ್ಮ ಕೂಡಲಸಂಗಮದೇವ.

ಇನ್ನು ಷಡ್ವರ್ಣವೆಂದರೆ ಷಡಕ್ಷರ. ವರ್ಣಾದ್ಯಕ್ಷೆ ಮೂಲ ಬೀಜವಾಗಿರುವ **'ಓಂ ನಮಃ ಶಿವಾಯ'** ವೆಂಬ ಷಡಕ್ಷರ ಮಂತ್ರ. ಮಂತ್ರ ಪರಶಿವನ ವಾಚಕ, ಶಬ್ದ, ವಾಚ್ಯ ಅಥವಾ ಅರ್ಥ ಪರಶಿವ. ಶಬ್ದ ಶ್ರುತಿಗೋಚರ, ಗಮ್ಯ. ಅರ್ಥ ಅಗೋಚರ, ಭಾವಗಮ್ಯ. ಹೀಗೆ ಕೂಡಲಸಂಗಮದೇವ ಷಡ್ವರ್ಣಕ್ಕೆ ಅತೀತನೆನಿಸಿದ್ದಾನೆ.

**೩. ಅಷ್ಟತ್ರಿಂಶತ್ಕಲಾತೀತ :**

ಅಷ್ಟತ್ರಿಂಶತ್ ಎಂದರೆ ಮೂವತ್ತೆಂಟು. ಅಷ್ಟತ್ರಿಂಶತ್ ಕಲೆಗಳೆಂದರೆ ೩೮ ಕಲೆಗಳು. ಇವು ಪರಶಿವನ ಸದ್ಯೋಜಾತಾದಿ ಪಂಚಬ್ರಹ್ಮರುಗಳ ಕಲೆಗಳು. ಇವೇ ಪಂಚ ಮುಖೋದ್ಭೂತ ಪಂಚಸಾದಾಖ್ಯಗಳ ಕಲೆಗಳೂ ಎನಿಸುತ್ತವೆ. ಪಂಚಬ್ರಹ್ಮಮಂತ್ರಗಳೇ ಸದ್ಯೋಜಾತ ವಾಮದೇವ ಅಘೋರ ತತ್ಪುರುಷ ಈಶಾನ ಮಂತ್ರಗಳು. ಇವುಗಳಲ್ಲಿ ಸಿದ್ಧಿ, ಋದ್ಧಿ, ದ್ಯುತಿ, ಲಕ್ಷ್ಮೀ, ಮೇಧಾ, ಶಾಂತಿ, ಸ್ವಧಾ ಮತ್ತು ಧೃತಿ ಇವೆಂಟು ಸದ್ಯೋಜಾತ ಬ್ರಹ್ಮನ ಕಲೆಗಳು. ರಾಜಸೀ, ರಕ್ಷಾ, ರತಿ, ಪಾಲಿನೀ, ಕಾಮಾ, ಸಂಯಮೀ, ಕ್ರಿಯಾ, ಬುದ್ಧಿ, ಬ್ರಾಹ್ಮಣೀ, ಧಾತ್ರೀ, ಬ್ರಾಹ್ಮೀ ಮೋಹಿನೀ ಹಾಗೂ ಗ್ರಾಮಿಣೀ– ಈ ಹದಿಮೂರು ವಾಮದೇವ ಬ್ರಹ್ಮನ ಕಲೆಗಳು. ತಾಮಸೀ, ಮೋಹಾ, ಕ್ಷುಧಾ, ನಿದ್ರಾ, ಮೃತ್ಯು, ಮಾಯಾ, ಅಭಯಾ, ಜರ–ಇವೆಂಟು ಅಘೋರ ಬ್ರಹ್ಮದ ಕಲೆಗಳು ಇದರಂತೆ, ಶಾಂತಿ, ವಿದ್ಯಾ, ಪ್ರತಿಷ್ಠಾ ಹಾಗೂ ನಿವೃತ್ತಿ ಈ ನಾಲ್ಕೂ ತತ್ಪುರುಷ ಬ್ರಹ್ಮದ ಕಲೆಗಳು. ಕೊನೆಯದಾಗಿ ಶಶಿನೀ, ಅಂಗದಾ, ಇಷ್ಟದಾ, ಮರೀಚೀ ಹಾಗೂ ಜ್ವಲಿನೀ ಇಂಬಿವೈದು ಈಶಾನ ಬ್ರಹ್ಮದ ಕಲೆಗಳು. ಹೀಗೆ ೮+೧೩+೮+೪+೫=೩೮ ಕಲೆಗಳು. ಇಂಥ ಮೂವತ್ತೆಂಟು ಕಲೆಗಳಿಗೂ ಅತೀತನಾದವನು ನಮ್ಮ ಕೂಡಲಸಂಗಮದೇವನು. ಅಥವಾ ಪಂಚಬ್ರಹ್ಮೋದಯಕ್ಕೂ ಮುನ್ನ ಮುನ್ನ ಇರ್ದಾತನೇ ನಮ್ಮ ಕೂಡಲಸಂಗಮದೇವ.

ಉಪಲಕ್ಷಣಯಾ ಶಿವತತ್ತ್ವ ಮೊದಲುಗೊಂಡು ಪೃಥ್ವೀ ತತ್ವದವರೆಗಿನ ಷಟ್‌ತ್ರಿಂಶತ್(ಮೂವತ್ತಾರು) ತತ್ತ್ವಗಳಿಗೂ ಅತೀತನೆಂಬುದನ್ನು ಗ್ರಹಿಸಬಹುದು.

**೪. ವ್ಯೋಮಾತೀತ :**

ವ್ಯೋಮ ಎಂದರೆ ಆಕಾಶ. 'ಯತ್ರ ಯತ್ರ ಅವಕಾಶಃ ತತ್ರ ಆಕಾಶಃ' ಎಂಬಂತೆ ಸರ್ವಗತತ್ವ ಮತ್ತು 'ನಭಃ ಸರ್ವಾಶ್ರಯಂ ಸ್ಯಾತ್' ಎಂಬಂತೆ ಎಲ್ಲಕ್ಕೂ ಆಶ್ರಯವಾಗಿರುವಂತಹುದು ಆಕಾಶದ ಲಕ್ಷಣ ಹಾಗೂ 'ಶಬ್ದಗುಣಮಾಕಾಶಂ' ಶಬ್ದವು ಆಕಾಶದ ಗುಣ. ಇಂಥ ಆಕಾಶತತ್ವವನ್ನೂ ಮೀರಿದ ನಿಲವು ಕೂಡಲಸಂಗನದು.

ಹೀಗೆ ಕೂಡಲಸಂಗನು ವೇದಗಳಿಗೆ, ಷಡ್ವರ್ಣಕ್ಕೆ, ಅಷ್ಟತ್ರಿಂಶತ್ ಕಲೆಗಳಿಗೆ ಹಾಗೂ ವ್ಯೋಮಕ್ಕೆ 'ಅತೀತ'ನಾಗಿದ್ದರೂ ಅಂದರೆ ಮೀರಿ ನಿಂತಿದ್ದರೂ, ವೇದಗಳಿಂದ ಪ್ರತಿಪಾದ್ಯನೂ, ಷಡಕ್ಷರವಾಚ್ಯನೂ, ಅಷ್ಟತ್ರಿಂಶತ್ ಕಲೆಗಳಿಗೆ ಮೂಲನೂ, ವ್ಯೋಮ ಮೂರುತಿಯೂ ಆಗಿರುವುದರಿಂದ ಇವುಗಳಿಂದ 'ಅತೀತ'ನೂ ಅಂದರೆ ಸರ್ವವ್ಯಾಪ್ತನೂ ಆಗಿದ್ದಾನೆ. ಆದ್ದರಿಂದ ನಮ್ಮ ಕೂಡಲಸಂಗಮದೇವ ಸಕಲಾತೀತನೆನಿಸಿ ಸಕಲಾತೀತನಾಗಿದ್ದಾನೆ. ಹೀಗೆ

**ಆಗಮ ವೇದಾದಿ ಸಕಲಶಾಸ್ತ್ರ ಪ್ರಮಾಣರು**
**ಅದನ್ನು ಅಂತು ಇಂತು ಎಂದು ಉಪಮಿಸಲಿಲ್ಲ**
**ಮಹಾಂತಕೂಡಲಸಂಗಮದೇವಾ.** ☆

'ಅನುಭವಿಯ ಅನುಭವವೇ ವೇದ' –ಶ್ರೀ ಪ್ರಭುದೇವರು







# ತೀವ್ರರೋಗಗಳಲ್ಲಿ ನಿಸರ್ಗೋಪಚಾರ

## ಹೊಟ್ಟೆನೋವು

–ಜಿ.ವಿ. ವೆಂಕಟನಾರಾಯಣ ಶಾಸ್ತ್ರಿ *

**ಹೊಟ್ಟೆನೋವು :**

*ತಲೆ ಇರುವವರಿಗೆಲ್ಲಾ, ತಲೆನೋವು ತಪ್ಪಿದ್ದಲ್ಲ*
*ಹೊಟ್ಟೆ ಇರುವವರಿಗೆಲ್ಲಾ ಹೊಟ್ಟೆ ನೋವೆಂದು*
*ಹೇಳಲೇ ಬೇಕಿಲ್ಲ ಇಷ್ಟು ಚಿಕ್ಕದಾದ ತಲೆನೋವಿಗೆ*
*ಇರಬೇಕಾದರೆ ಕಾರಣ ನೂರಾರು*
*ಅಷ್ಟು ದೊಡ್ಡ ಹೊಟ್ಟೆಯ ನೋವಿಗೆ ಬೇಡವೇ*
*ಕಾರಣ ಸಾವಿರಾರು ?*
*ಹೆಚ್ಚಿಸಬೇಕಿಲ್ಲ ಕಾರಣಗಳ ಸಂಖ್ಯೆ*
*ಅರ್ಥವಾದರೆ ಸಾಕು ಕಾರಣಗಳ ವ್ಯಾಖ್ಯೆ*
*ತಲೆಯ ನೋವಿಗೆ ಕಾರಣವನು ಉಪಯೋಗಿಸಿ*
*ಹುಡುಕು ಹೊಟ್ಟೆಯ ನೋವಿಗೆ ಕಾರಣ*
*ಬಾಯಿಂದ ನೂಕುವ ಸರಕು*
*ಮನೆಯ ಗೇಟು ಮುರಿದರೆ ಒಳಗೆ ನುಗ್ಗುವುದು*
*ಹಂದಿ*
*ಆಹಾರಕೆ ಸದಾ ಬಾಯಿ ತೆರೆದಿಟ್ಟರೆ*
*ಹೊಟ್ಟೆನೋವಿನಾ ಬಂಧಿ*
*ಹೊಟ್ಟೆನೋವಿಗೆ ಇರಬಹುದು ಸಾವಿರ ಕಾರಣ*
*ಅವುಗಳಲಿ ಮುಖ್ಯವಾದದ್ದು ಅಜೀರ್ಣ*
*ಅಳವಡಿಸಬೇಕು ಬಾಯಿಗೆ ಬ್ರೇಕು (Brake)*
*ಹೊಟ್ಟೆನೋವಿನಿಂದ ಪಾರಾಗಲು ಅದೊಂದೇ ಸಾಕು*

ಹೊಟ್ಟೆ ಎಂದೊಡನೆಯೇ ಬಹಳ ಜನರಿಗೆ ಅರ್ಥವಾಗುವುದು ಹೊರಗಡೆ ಎದ್ದು ಕಾಣುವ ಅಂಗ. ಹೊಟ್ಟೆ ನೋವಿಗೆ ಕಾರಣ ಅದಲ್ಲ. ಒಳಗಡೆಯ ಅನೇಕ ಅಂಗಗಳ ಸಮೂಹ. ಜಠರ, ಪಿತ್ತಜನಕಾಂಗ, ಗುಲ್ಮ, ಮೇದೋಜೀರಕಾಂಗ, ಸಣ್ಣಕರುಳು, ದೊಡ್ಡಕರುಳು, ಡಿಯೋಡಿನಂ, ಅಪೆಂಡಿಕ್ಸ್ ಮುಂತಾದ ಅಂಗಗಳ ಗುಂಪಿಗೆ ಹೊಟ್ಟೆ ಎನ್ನುತ್ತೇವೆ. ಹೊಟ್ಟೆಯು ಎದೆಯ ಕೆಳಭಾಗದಿಂದ ಪ್ರಾರಂಭವಾಗುತ್ತದೆ. ಹೊಟ್ಟೆಯನ್ನು ಎದೆಯಿಂದ ಬೇರ್ಪಡಿಸಲು ಒಂದು ಬೋರಲು ಹಾಕಿದ ಡಬರಿಯ ಆಕಾರದ ಮಾಂಸದ ಬಲವಾದ ಪೊರೆಯಿದೆ. ಅದನ್ನು ವಪೆ ಎನ್ನುವರು. ಇದು ಹೊಟ್ಟೆಯ ಮೇಲ್ಛಾವಣಿ. ಹೊಟ್ಟೆಯ ಕೆಳಗಡೆಯ ಸೀಮಾರೇಖೆ ಕೀಳ್ಗುಳಿ(ಪೆಲ್ವಿಸ್) ಅದು ಮೂಳೆಗಳ ಬೋಗುಣಿ (ಬೇಸಿನ್)ಯತಿದೆ. ಸೊಂಟದ ಎರಡೂ ಮೂಳೆಗಳ ನಡುವೆ (ಹಿಪ್‌ಬೋನ್ಸ್) ಈ ಪೆಲ್ವಿಸ್ ಇದೆ. ಪಕ್ಕದಲ್ಲಿ ಪಕ್ಕೆಲುಬು ಮತ್ತು ಸ್ನಾಯುವಿನ ಗೋಡೆಯಿಂದ ಸುತ್ತುವರಿಯಲ್ಪಟ್ಟಿದೆ. ವಪೆಯ ಕೆಳಭಾಗದಲ್ಲಿ ಪಿತ್ತಜನಕಾಂಗವಿದೆ, ಬಲಭಾಗದಲ್ಲಿ ಇಂಗ್ಲೀಷ್ ಅಕ್ಷರ 'J' ಆಕಾರದಲ್ಲಿ ಜಠರವಿದೆ, ಎಡಭಾಗದಲ್ಲಿ ಗುಲ್ಮವಿದೆ. ಹೊಟ್ಟೆಯನ್ನು ಪ್ರಧಾನವಾಗಿ ಸಣ್ಣ, ದೊಡ್ಡ ಕರುಳುಗಳು ಆವರಿಸಿಕೊಂಡಿದೆ. ಇವುಗಳ ಜೊತೆಯಲ್ಲಿ ಮೇದೋಜೀರಕಾಂಗವಿದೆ. ಈ ಅಂಗಗಳ ಹಿಂದೆ ಎರಡು ಮೂತ್ರಪಿಂಡಗಳಿವೆ. ಸ್ತ್ರೀಯರಿಗೆ ಹೊಟ್ಟೆಯ ಕೆಳಭಾಗದಲ್ಲಿ ಗರ್ಭಕೋಶವಿದೆ. ದೊಡ್ಡಕರುಳಿನ ಬಲತುದಿಯಲ್ಲಿ ಅಪೆಂಡಿಕ್ಸ್. ಮೇಲಿನ ಯಾವುದೇ ಅಂಗದಲ್ಲಿ ತೊಂದರೆಯಾದರೂ ಹೊಟ್ಟೆಯ ನೋವಿನ ರೂಪದಲ್ಲಿ ತೋರ್ಪಡುತ್ತದೆ.

**ಲಕ್ಷಣಗಳು :** ನೋವು, ನುಲಿ(Colic), ಬಟ್ಟೆಯನ್ನು ಹಿಂಡಿದಂತೆ ಕರುಳು ಹಿಂಡಲ್ಪಡುವ ಅನುಭವ, ಸೂಜಿಯಿಂದ ಚುಚ್ಚಿದಂತೆ, ಒಡೆತ, ಸೆಳವು, ಹೊಟ್ಟೆಯಲ್ಲಿ ಉರಿ ಇತ್ಯಾದಿ. ಇವೆಲ್ಲಾ ಹೊಟ್ಟೆಯ ನೋವಿನ ವಿವಿಧ ಬಗೆಗಳು.

**ಕಾರಣ :** ಹೊಟ್ಟೆಯಲ್ಲಿನ ಆಯಾ ಅಂಗಗಳ ತೊಂದರೆಯಿಂದ ಬಂದ ಹೊಟ್ಟೆಯ ನೋವನ್ನು ಆಯಾ ಅಂಗಗಳಿಗೆ ಸಂಬಂಧಿಸಿದಂತೆ ಪ್ರತ್ಯೇಕವಾಗಿ ಬರೆಯಲಾಗಿದೆ. ಇಲ್ಲಿ ಸಾಮಾನ್ಯವಾದ ಹೊಟ್ಟೆಯ ನೋವಿನ ಬಗ್ಗೆ ಚಿಂತಿಸಲಾಗಿದೆ. ಸಾಧಾರಣವಾಗಿ ಹೊಟ್ಟೆಯ ನೋವಿಗೆ ಕಾರಣ, ಅಜೀರ್ಣ.

* 'ನಿಸರ್ಗ ಯೋಗಧಾಮ' ನಂ. ೨/೨೦೫೮, ೧೧ನೇ ಕ್ರಾಸ್, ಎಸ್.ಎಸ್.ಪುರಂ, ತುಮಕೂರು –೫೭೨ ೧೦೨.

'ಬದಲಾವಣೆ ಎನ್ನುವುದು ಜೀವಂತಿಕೆಯ ಲಕ್ಷಣ' –ಡಾ|| ವಿದ್ಯಾಶಂಕರ್. ಎಸ್

ಅದಕ್ಕೆ ಕಾರಣ ನಮ್ಮ ಆಧುನಿಕ ಜೀವನ. ಅದರಿಂದಾದ ವಿಷಸಂಗ್ರಹ ಹೊಟ್ಟೆಯ ನೋವನ್ನು ಉಂಟುಮಾಡುತ್ತದೆ.

**ನಿಸರ್ಗೋಪಚಾರ :** ಹೊಟ್ಟೆಯ ನೋವು ಯಾವುದೇ ಕಾರಣಕ್ಕೆ ಬಂದಿರಲಿ ಕೆಳಗಿನ ಉಪಚಾರಗಳು ಅದನ್ನು ತಗ್ಗಿಸುತ್ತವೆ. ನೋವಿರುವಾಗ ಆಹಾರದ ಮಾತು ದೂರ ಉಳಿಯಿತು. ಆದ್ದರಿಂದ ಉಪವಾಸ, ನಿಸರ್ಗವೇ ವಿಧಿಸಿರುವ ಮೊದಲ ಔಷಧ.

1. **ಉಪವಾಸ :** ಆಗಾಗ ಕೊಂಚ, ಕೊಂಚವೇ ಬಿಸಿನೀರನ್ನು ಕುಡಿಯುತ್ತಿರಬೇಕು. ಅದಕ್ಕೆ ಕೊಂಚ ನಿಂಬೆಯ ಹಣ್ಣಿನ ರಸವನ್ನು ಹಾಕಿಕೊಳ್ಳುವುದು. ಜೇನುತುಪ್ಪ, ಬೆಲ್ಲ, ಸಕ್ಕರೆ ಇತ್ಯಾದಿಗಳು ಬೇಡ.
2. ನೀರನ್ನು ಸಣ್ಣ ಸಣ್ಣ ಗುಳ್ಳೆಗಳು ಬರುವವರೆಗೂ ಕಾಯಿಸಿ ಅದನ್ನು ಹಾಟ್‌ಬ್ಯಾಗಿಗೆ ಹಾಕಿ ಹೊಟ್ಟೆಯ ಮೇಲಿಟ್ಟು ಒಂದು ಬಟ್ಟೆಯನ್ನು ಕಟ್ಟಬೇಕು. ಅದರ ಮೇಲೆ ಒಂದು ಉಲ್ಲನ್ ಬಟ್ಟೆಯನ್ನು ಸುತ್ತಿ ಪಿನ್ ಹಾಕಬೇಕು. 20ನಿಮಿಷಗಳ ಕಾಲ.
3. ನಂತರ ಕೂಡಲೇ ಹೊಟ್ಟೆಗೆ ಮಣ್ಣುಪಟ್ಟಿ ಅಥವಾ ತಣ್ಣೀರು ಪಟ್ಟಿ, 20 ನಿಮಿಷಗಳ ಕಾಲ.
4. ಎನಿಮಾ. 5. ಹೊಟ್ಟೆಯ ನೋವು ಕಡಿಮೆಯಾಗದಿದ್ದರೆ ಕೊಂಚ ವೇಳೆ ಬಿಟ್ಟು ಮತ್ತೆ ಬಿಸಿನೀರು, ಅಥವಾ ತಣ್ಣೀರಿನ ಪಟ್ಟಿಗಳನ್ನು ಆಗಾಗ ಹಾಕಬೇಕು.
6. ಬಿಸಿನೀರಿನ ಕಟಿಸ್ನಾನ.
7. ಕೂಡಲೇ ತಣ್ಣೀರಿನ ಕಟಿಸ್ನಾನ.
8. ಬಿಸಿನೀರಿನ ಬೆನ್ನುಹುರಿ ಸ್ನಾನ. ಆ ಸ್ಥಿತಿಯಲ್ಲಿ ನಿದ್ದೆ ಮಾಡುವುದು, ನಿದ್ದೆಯಿಂದ ಎಚ್ಚರವಾಗುವಷ್ಟರಲ್ಲಿ ನೋವು ಕಡಿಮೆಯಾಗುತ್ತದೆ.
9. ಹಸಿವು ಬರುವವರೆವಿಗೂ ಆಹಾರ ಬೇಡ, ಹಸಿವು ಬಂದ ಕೂಡಲೇ ಲಘುವಾಗಿ ಬೇಯಿಸಿದ ತರಕಾರಿ, ಹಣ್ಣುಗಳನ್ನು ತಿನ್ನಬೇಕು. ಹೆಚ್ಚು ತೆಗೆದುಕೊಳ್ಳಬಾರದು. ನಂತರ ಅನ್ನ, ಬೇಯಿಸಿದ ತರಕಾರಿಗಳು ನಡೆದೀತು. ಮಧ್ಯೆ ಬೆಣ್ಣೆ ತೆಗೆದ ಮಜ್ಜಿಗೆಯನ್ನು ಕುಡಿಯಬಹುದು.

ಮನೆಮದ್ದು : ಓಮ, ಶುಂಠಿ ಇತ್ಯಾದಿಗಳ ಕಷಾಯ.

**ಉಷ್ಣದ ಹೊಟ್ಟೆಯ ಕಚ್ಚು :**

'ಬೇಡವೆಂದರೂ ಪಪಾಯಿ ಹಣ್ಣುಗಳನ್ನು ಅಷ್ಟೊಂದು ತಿಂದರೆ ಹೊಟ್ಟೆ ಕಚ್ಚು ಬರದೇ ಇನ್ನೇನಾಗುತ್ತದೆ' ತಾಯಿಯ ಕಾಮೆಂಟ್ರಿ.

'ಮನೆಯಲ್ಲಿಯೇ ಮಾವಿನ ಮರವಿದೆಯೆಂದು ಅಷ್ಟೊಂದು ತಿಂದರೆ, ಉಷ್ಣ ಹೆಚ್ಚಾಯಿತು, ಹೊಟ್ಟೆಯ ಕಚ್ಚು ಬಂದಿತು' - ಅಜ್ಜಿಯ ಕಳಕಳಿ.

ಇವರುಗಳು ಹೇಳುವುದೇನು? ಉಷ್ಣ ಎಂದರೆ ಏನು? '...ಇದರ ತಾತ್ಪರ್ಯ ಇಷ್ಟೆ- ಜೀವಸತ್ವ ಮತ್ತು ಆಯುರ್ವೇದದಲ್ಲಿ ಹೇಳುವ ವೀರ್ಯ ಈ ಎರಡೂ ಒಂದೇ ಎಂಬುದು... ಆದರೆ ಕೆಲವು ಆಚಾರ್ಯರು ಕೇವಲ ಕಾರ್ಯದೃಷ್ಟಿಯಿಂದ ವೀರ್ಯವನ್ನು ಉಷ್ಣ ಮತ್ತು ಶೀತ ಎಂದು ಎರಡು ವಿಧವೆಂದೇ ಮಾನ್ಯ ಮಾಡಿದ್ದಾರೆ... ಪ್ರಾಚೀನ ಆಚಾರ್ಯರು- ದ್ರವ್ಯಾಂತರ್ಗತವಾದ ಯಾವ ಶಕ್ತಿಯ ಮೂಲಕ ಕಾರ್ಯ ಉಂಟಾಗುತ್ತದೋ ಆ ಶಕ್ತಿಯನ್ನೇ ಇಲ್ಲಿ ವೀರ್ಯವೆಂದಿದ್ದಾರೆ' ಸ್ವಯಂವೈದ್ಯ, ತಿರುಕ.

ಉಷ್ಣವೆಂದರೆ, ಶರೀರದಲ್ಲಿನ ನೀರಿನ ಅಂಶ ಕಡಿಮೆಯಾಗುವಿಕೆ (Dehydration) ಎಂದು ಅರ್ಥೈಸಬಹುದು. ಇದನ್ನು ಬರೀ ನೀರು ಕೊಡುವುದರಿಂದ ತಕ್ಷಣ ಸರಿಪಡಿಸಲು ಸಾಧ್ಯವಿಲ್ಲ. ಆಗಾಗ ಕೊಂಚ ಕೊಂಚವೇ ನೀರು ಕೊಡುವುದು ಸರಿ, ಆದರೆ ತಣ್ಣೀರಿನ ಪಟ್ಟಿ ಇತ್ಯಾದಿಗಳಿಂದ ಕೊಟ್ಟ ನೀರನ್ನು ಶರೀರ ಉಪಯೋಗಿಸಿಕೊಳ್ಳುವ ಹಂತಕ್ಕೆ ತರಬೇಕು. ನಿಧಾನವಾದ ನೀರ್ಗಳೆತವೇ ಶರೀರದಲ್ಲಿ ರೂಕ್ಷತೆಯನ್ನು ಉಂಟು ಮಾಡುತ್ತದೆ. ಅದರ ಫಲವೇ ಉಷ್ಣ. ಇದರಿಂದ ಅನೇಕ ಕಾಯಿಲೆಗಳು ಬರಬಹುದು. ಆ ಪೈಕಿ ಹೊಟ್ಟೆಯ ಕಚ್ಚೂ ಒಂದು. ಹೊಟ್ಟೆಯ ಕಚ್ಚು ಬಂದಾಗ ಬಿಸಿನೀರು ಮತ್ತು ತುಪ್ಪ ಮನೆಯ ವೈದ್ಯ. ಇದನ್ನು ಕೊಡುವುದರಿಂದ ಕಚ್ಚು ಕೊಂಚ ಕಡಿಮೆಯಾಗುತ್ತದೆ. ನಂತರ ಎನಿಮಾ, ತಂಪುಪಟ್ಟಿ ಇತ್ಯಾದಿಗಳಿಂದ ಶರೀರದ ಹೆಚ್ಚಾದ ಉಷ್ಣತೆಯನ್ನು ಕಡಿಮೆ ಮಾಡಬೇಕು.

-ಮುಂದುವರಿಯುತ್ತದೆ

'ಜಗತ್ತಿನ ಬಹುತೇಕ ಸಮಸ್ಯೆಗಳಿಗೆ ವಚನ ಸಾಹಿತ್ಯದಲ್ಲಿ ಪರಿಹಾರವಿದೆ' -ರಂಜಾನ್ ದರ್ಗಾ

